

ಕಾಯಕವೇ ಕೈಲಾಸ

# ಸಿದ್ಧಗಂಗಾ



ಸಂಪುಟ : ೪೬ ಆಗಸ್ಟ್ ೨೦೧೦ ಸಂಚಿಕೆ : ೮

ಹಾಸನದ ತಣ್ಣೀರುಹಳ್ಳ ಮಠದಲ್ಲಿ ಜುಲೈ ೨೬ ರಂದು ನೂತನ ಪೀಠಾಧಿಪತಿ ಪೂಜ್ಯ ಶ್ರೀ ಶ್ರೀ ಇಮ್ಮಡಿ ಶಿವಲಿಂಗಸ್ವಾಮಿಗಳವರಿಗೆ ಏರ್ಪಡಿಸಿದ್ದ ಭಕ್ತಿ ಸಮರ್ಪಣಾ ಸಮಾರಂಭದ ದಿವ್ಯಸಾನ್ನಿಧ್ಯ ವಹಿಸಿದ್ದ ಪರಮಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನ ನೀಡಿದರು. ವೇದಿಕೆಯಲ್ಲಿ ಸುತ್ತೂರು ಶ್ರೀಗಳು, ದೇಗುಲಮಠದ ಶ್ರೀಗಳು ಹಾಗೂ ಹರಗುರು ಚರಮೂರ್ತಿಗಳು ಉಪಸ್ಥಿತರಿದ್ದರು

ಕರ್ನಾಟಕದ ಘನತೆವೆತ್ತ ರಾಜ್ಯಪಾಲರಾದ ಶ್ರೀ ಹೆಚ್.ಆರ್. ಭಾರದ್ವಾಜ್ ಅವರು ಇತ್ತೀಚೆಗೆ ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀಗಳವರಿಂದ ದಿವ್ಯಾಶೀರ್ವಾದ ಪಡೆದರು.

ಪೂಜ್ಯ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ಶ್ರೀಮಠದಲ್ಲಿ ಏರ್ಪಡಿಸಿದ್ದ ೬೪ನೇ ಸ್ವಾತಂತ್ರ್ಯೋತ್ಸವ ಸಮಾರಂಭದಲ್ಲಿ ಜಿಲ್ಲಾಧಿಕಾರಿ ಡಾ. ಸಿ. ಸೋಮಶೇಖರ್ ಮಾತನಾಡುತ್ತಿರುವುದು. ವೇದಿಕೆಯಲ್ಲಿ ಸಚಿವ ಶ್ರೀ ವೆಂಕಟರಮಣಪ್ಪ, ಪೋಲೀಸ್ ವರಿಷ್ಠಾಧಿಕಾರಿ ಡಾ. ಹರ್ಷ ಉಪಸ್ಥಿತರಿದ್ದರು



## ಅಂತರಂಗ




ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೪೬ ಆಗಸ್ಟ್ ೨೦೧೦ ಸಂಚಿಕೆ : ೮


## ಒಳಪುಟಗಳಲ್ಲಿ ................




ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦

## ಆತ್ಮಾವಲೋಕನ

ಸ್ವಾತಂತ್ರ್ಯ ಪ್ರಾಪ್ತವಾಯಿತು. ಗುಲಾಮತ್ವ ನಿವಾರಣೆಯಾಯಿತು. ಎಲ್ಲರೆದುರು ತಲೆಯೆತ್ತಿ ನಿಲ್ಲುವಂತಾಯಿತು. ಸ್ವಾಭಿಮಾನದ ಧ್ವಜ ಹಾರಾಡಲು ತೊಡಗಿತು. ದೇಶವನ್ನು ಕಟ್ಟುವ ಕನಸನ್ನು ಸಾಕಾರಗೊಳಿಸುವತ್ತ ಹಿರಿಯರು ಮುನ್ನಡೆದರು. ಪ್ರಗತಿಯ ಪಥದಲ್ಲಿ ಹೆಜ್ಜೆ ಹಾಕಿದರು. ಉದಾತ್ತ ಚಿಂತನೆ ಅವರದಾಗಿತ್ತು. ದೇಶಕ್ಕಾಗಿ ನಾನಿದ್ದೇನೆ ಎಂಬ ಧ್ಯೇಯ ಅವರಿಗಿತ್ತು. ಯೋಜನೆಗಳನ್ನು ರೂಪಿಸುತ್ತಾ ನಡೆದರು. ಸಾಕಷ್ಟು ಯಶಸ್ಸನ್ನೂ ಕಂಡರು. ಆದರೆ ಆ ಪರಂಪರೆ ಕಾಲಕಳೆದಂತೆ ಇಳಿಮುಖವಾಯಿತು. ನನಗಾಗಿ ದೇಶವಿದೆ ಎಂಬ ಭಾವನೆಯ ಜನನಾಯಕರು ಅಧಿಕಾರ ಗದ್ದುಗೆಯ ಮೇಲೆ ಕುಳಿತರು. ಸೇವೆ ಎಂಬುದು ಉದ್ಯಮವಾಯಿತು. ಪ್ರಜಾಪ್ರಭುತ್ವಕ್ಕೆ ಮೋಡ ಮುಸುಕಿದಂತಾಯಿತು. ಪ್ರಜೆ ತಮ್ಮ ಪ್ರಭು ಎಂಬುದನ್ನು ಮರೆತರು. ಜನಪ್ರತಿನಿಧಿಗಳು ತಮಗಾಗಿ ಪ್ರಜೆ ಇದ್ದಾನೆ ಎಂದು ಭಾವಿಸಿದರು. ಜನರ ಹೆಸರಿನಲ್ಲಿ ತಮ್ಮ ಕಲ್ಯಾಣವನ್ನು ಸಾಧಿಸಿಕೊಳ್ಳುವತ್ತ ಮುಖ ಮಾಡಿದರು. ದಿನ ಬೆಳಗಾಗುವುದರೊಳಗಾಗಿ ಕೋಟ್ಯಾಧಿಪತಿಗಳಾಗುವ ಹುನ್ನಾರ ನಡೆಸಿದರು. ದುಡಿದು ತಿನ್ನುವ ಕೈಗೆ 'ಚಿಪ್ಪು' ಕೊಡುವಲ್ಲಿ ಹೃದಯ ಕಳೆದುಕೊಂಡರು. ಹೆಸರಿಗೆ ಪ್ರಗತಿ, ಅಭಿವೃದ್ಧಿ, ಯೋಜನೆಗಳು, ಆಗುತ್ತಿರುವುದು ಸ್ವಾರ್ಥ, ಸ್ವಜಾತಿ, ಸ್ವಪಕ್ಷಗಳ ಏಳ್ಗೆ. ಸುಮಧುರ, ಸಾಮರಸ್ಯದ ಬಾಳುವೆಗೆ ತೊಡರುಗಾಲು. ಜಾತಿಜಾತಿಗಳ ನಡುವೆ ದ್ವೇಷ, ಅಸಹನೆ, ಅಸಹಕಾರಗಳನ್ನು ಬಿತ್ತಿದರು. ಫಲ ಕಹಿಯಾಯಿತು. ವ್ಯಕ್ತಿ ವ್ಯಕ್ತಿಯ ಮಧ್ಯೆ ಅನುಮಾನ. ಯಾರೂ ಯಾರನ್ನೂ ನಂಬದಂತಹ ಸ್ಥಿತಿ ನಿರ್ಮಾಣ. ದಿನ ಬೆಳಗಾದರೆ ಮುಷ್ಕರಗಳು, ಜನತಂತ್ರ ವ್ಯವಸ್ಥೆಯನ್ನೇ ಬಗ್ಗಡಗೊಳಿಸುವ ಇಬ್ಬಂದಿತನ. ಸುಳ್ಳಿನ ಸರದಾರರ ಜಾತ್ರೆ. ಇಂದು ಹೇಳಿದ್ದು ನಾಳೆಗಿಲ್ಲ, ಈಗ ಹೇಳಿದ್ದು ಮರುಕ್ಷಣದಲ್ಲಿ ಬದಲು, ನಾಗರಿಕ ಗೋಸುಂಬೆಗಳು. ಪಾದಯಾತ್ರೆಗಳು, ಸಮಾವೇಶಗಳು, ಸಮ್ಮೇಳನಗಳು ನಡೆಯುತ್ತಲೇ ಇವೆ. ಅರ್ಥ ಕಳೆದುಕೊಳ್ಳುತ್ತಿವೆ. ಮುಂದಿನ ಜನಾಂಗಕ್ಕೆ ಯಾವ ಆದರ್ಶಗಳನ್ನು, ಜೀವನ ಮೌಲ್ಯಗಳನ್ನು ನಮ್ಮ ಜನನಾಯಕರು ಕೊಟ್ಟಿದ್ದಾರೆ; ಕೊಡುತ್ತಿದ್ದಾರೆ ? ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಕಂಡ ಸ್ವಾತಂತ್ರ್ಯವೇ ಇದು. ಆತ್ಮಾವಲೋಕನ ಆಗಸ್ಟ್ ಹದಿನೈದರಂದು ಮಾಡಿಕೊಳ್ಳಬೇಕಾದ ಪವಿತ್ರ ದಿನವಾದೀತೆ ?

64ನೇ ಸ್ವಾತಂತ್ರ್ಯೋತ್ಸವಕ್ಕೆ 'ಸಿದ್ಧಗಂಗಾ' ಓದುಗರಿಗೆ ಶುಭಾಷಯಗಳು.

–ಸಂಪಾದಕ.







## ಸಾಧನಾ ಸದನಗಳು

ಮಠಗಳು ಮಾನವೀಯತೆಯ ಮಂಗಳಧಾಮಗಳು. ಆತ್ಮಸಂಪತ್ತನ್ನು ಗಳಿಸುವ ಕಮ್ಮಟಗಳು. ಲೌಕಿಕ ಜೀವನವನ್ನು ಧರ್ಮದ ದಾರಿಯಲ್ಲಿ ಮುನ್ನಡೆಸುವ ಸಾಲುದೀಪಗಳು. ಸೇವೆಯ ರಹಸ್ಯವನ್ನು ತಿಳಿಸುವ ಆಧ್ಯಾತ್ಮಿಕ ಕೇಂದ್ರಗಳು. ಜನಮನದಲ್ಲಿ ಪ್ರೀತಿಯನ್ನು ಬಿತ್ತುವ ಕೇಂದ್ರಗಳು. ಮನುಷ್ಯನಾದವನು ತನ್ನ ಸಾರ್ಥಕತೆಯನ್ನು ಕಾಣಲು ಸಹಕರಿಸಲಿರುವ ಸಾಧನಾ ಸದನಗಳು.

ನಾಡಿನುದ್ದಗಲದಲ್ಲಿ ಮಠಗಳಿವೆ. ಕೆಲವು ಮಠಗಳು ತಮ್ಮ ಕಾಲಮೇಲೆ ತಾವು ನಿಂತಿವೆ. ಭಕ್ತಸಮುದಾಯವನ್ನು ಹೊಂದಿವೆ. ಚಾರಿತ್ರ್ಯ ಶುದ್ಧಿಯನ್ನು ಕಾಪಾಡಿಕೊಂಡು ಬಂದಿವೆ. ಲೋಕಮುಖಿಯಾಗಿಯೂ ಶಿಕ್ಷಣ, ಸಾಮಾಜಿಕ ಮತ್ತು ಸಾಂಸ್ಕೃತಿಕವಾಗಿ ಸೇವೆಸಲ್ಲಿಸುತ್ತಿವೆ. ಜಾತ್ರೆ, ಉತ್ಸವ, ಜಯಂತಿ, ಶಿಬಿರಗಳನ್ನು ಸಭೆ ಸಮಾರಂಭ ಸಮ್ಮೇಳನ, ಹಲವು ಬಗೆಯ ಔಪಯೋಗಿಕ ಪ್ರದರ್ಶನ ಮುಂತಾದುವುಗಳನ್ನು ಏರ್ಪಡಿಸುತ್ತ ಜನಕಲ್ಯಾಣದಲ್ಲಿ ನಿರತವಾಗಿವೆ. ಶಿಕ್ಷಣ ಸಂಸ್ಥೆಗಳ ಮೂಲಕ ಬಹುದೊಡ್ಡ ಸೇವೆಯನ್ನೇ ಮಾಡುತ್ತ ಬಂದಿವೆ. ಸಾವಿರಾರು ಮಂದಿಗೆ ಉದ್ಯೋಗ ನೀಡಿ ಜೀವನಕ್ಕೆ ಭದ್ರತೆಯನ್ನು ಕಲ್ಪಿಸಿವೆ. ಬಳಿಗೆ ಬಂದವರಿಗೆ ಬೆಳಕು ನೀಡಿವೆ.

ಮಠಗಳ ಸೇವಾಸೂತ್ರಗಳನ್ನು ಹಿಡಿದಿರುವ ಮಠಾಧಿಪತಿಗಳು ತಮ್ಮ ವೈಯಕ್ತಿಕ ಜೀವನವನ್ನು ಪವಿತ್ರವಾಗಿಟ್ಟುಕೊಂಡು ಜನಮನದಲ್ಲಿ ಗೌರವಾದರಗಳಿಗೆ ಭಾಜನರಾಗಿದ್ದಾರೆ. ಅವರ ಸೇವೆಗೆ ಕುಂದುಕೊರತೆಗಳು ಬರದಂತೆ ವ್ಯವಸ್ಥೆಯನ್ನೂ ಸಮಾಜ ನೋಡಿಕೊಳ್ಳುತ್ತಿದೆ. ಆದರೆ ಎಲ್ಲ ಮಠಗಳಿಗೂ ಈ ವಿಧದ ಸೌಲಭ್ಯ ಭಾಗ್ಯವಿಲ್ಲ. ಕೆಲವು ಮಠಗಳಲ್ಲಿರುವ ಮಠಾಧಿಪತಿಗಳಿಗೆ ಅವರ ಪೂಜಾದಿಕಾರ್ಯಗಳಿಗಾಗಲೀ, ಪ್ರಸಾದ ವ್ಯವಸ್ಥೆಗಾಗಲೀ ಆರೋಗ್ಯಾದಿಗಳಿಗಾಗಲೀ ಗಮನ ನೀಡುವ ಸೇವಾ ವ್ಯವಸ್ಥೆಯೂ ಇಲ್ಲದಿರುವ ಪರಿಸ್ಥಿತಿಗಳು ಉಂಟು. ಕೆಲವು ಮಠಗಳಲ್ಲಿ ಆ ಮಠಗಳ ಶ್ರೀಗಳವರ ಪೂರ್ವಾಶ್ರಮದ ಬಂಧುಗಳು ಇರುವುದಾದರೂ ಶ್ರೀಗಳವರ 'ಇಂಗಿತ'ವನ್ನರಿತು ನಿರ್ಮಮಕಾರದಿಂದ ಸೇವೆ ಸಲ್ಲಿಸುವವರು ವಿರಳ. ಆದರೂ ಅನಾನುಕೂಲತೆಗಳ, ಸೌಲಭ್ಯ ಅಭಾವಗಳ ನಡುವೆ ತಮ್ಮ ಮಠಗಳಲ್ಲಿ ದೀಪ ಹೊಚ್ಚಲೂ ಅಸಹಾಯಕ ಸ್ಥಿತಿಯಲ್ಲಿರುವ ಶ್ರೀಗಳು ತಮ್ಮ ಸಮಾಜಮಧ್ಯದಲ್ಲಿ ಧ್ಯೇಯನಿಷ್ಠರಾಗಿ, ಶುಚಿಶುಭ್ರರಾಗಿ, 'ಉರಿಬರಲಿ ಸಿರಿಬರಲಿ' ಬೇಕುಬೇಡವೆನ್ನದೆ ಸ್ಥಾನಮಾನವನ್ನು ಕಾಪಾಡಿಕೊಂಡು ಬರುತ್ತಿರುವುದು ಸಮಾಜದ ಪುಣ್ಯವೇ ಆಗಿದೆ.

*





ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

ಉತ್ತರಲೋಕದಲ್ಲಿ ಸತ್ಯಜ್ಞಾನಾನಂದವೆಂಬ ಅಂಗನೆ
ಮೃತ್ಯುಲೋಕವನೆಯ್ದಲು
ಆ ಶಕ್ತಿಯರ ಕೃತಕೃತ್ಯಂಗಳು ಕೆಟ್ಟು
ಲೋಕವೆಲ್ಲ ಭಕ್ತಿ ಸಾಮ್ರಾಜ್ಯವಾಯಿತ್ತು ನೋಡಾ
ಶಕ್ತಿಭಕ್ತಿಯೆಂಬ ಸತ್ಕೃತ್ಯ ನಷ್ಟವಾಗಿ
ಮುಕ್ತ್ಯಂಗನೆಯ ಮುಖವ ನೋಡುತ್ತ ನೋಡುತ್ತ
ಸಚ್ಚಿದಾನಂದೈಕ್ಯನಾದೆನು ಕಾಣಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

ಸಮಸ್ತ ಕರಣೇಂದ್ರಿಯಂಗಳ ತರಹರವನುಳ್ಳ ಬ್ರಹ್ಮರಂಧ್ರವೆಂಬ ರಾಷ್ಟ್ರದಲ್ಲಿಯ ಸತ್‌ಚಿತ್ತಾನಂದಸ್ವರೂಪವಾದ ಪರಬ್ರಹ್ಮದಲ್ಲೇಕತ್ವವನುಳ್ಳ ಶುದ್ಧವಿದ್ಯಾಸ್ವರೂಪವಾದ ಶರಣ ಸತಿಯು, ಅಂತಪ್ಪ ಪರಬ್ರಹ್ಮವು ಶಿಷ್ಯಬೋಧೋಪದೇಶಾರ್ಥವಾಗಿ, ಶ್ರೀಗುರುವಿನ ದೀಕ್ಷಾತ್ರಯದಿಂದ ಭಾವಮನದೃಷ್ಕರತಳಗಳಿಂದ ವತರಿಸಿ, ತ್ರಿವಿಧಾಂಗದಲ್ಲಿ ತ್ರಿವಿಧ ಲಿಂಗವಾಗಿ ಸಂಬಂಧವಾಗಲು, ಆತನು ತ್ರಯ ಸಂಬಂಧವಾದ ಕ್ರಿಯಾ ಜ್ಞಾನೇಚ್ಛಾಶಕ್ತಿಗಳ ವ್ಯಾಪಾರವೆಲ್ಲವು ಲಿಂಗದಲ್ಲಿ ತರಹವನ್ನೈದಿ ಆ ಸಕಲ ಕ್ರಿಯಾಜ್ಞಾನೇಂದ್ರಿಯಂಗಳೆಲ್ಲವು ಲಿಂಗಕರಣೇಂದ್ರಿಯಂಗಳಾಗೊಪ್ಪುತಿಹವು, ಶರಣಲಿಂಗವೆಂದು ಭಿನ್ನಭಾವ ನಿವೃತ್ತಿಯಾಗಿ, ಸಮ್ಯಗ್ ಜ್ಞಾನಾಚರಣೆವಿಡಿದಾಚರಿಸುತ್ತ, ಸಚ್ಚಿದಾನಂದ ಸ್ವರೂಪನಾದ ಪರಬ್ರಹ್ಮದಲ್ಲಿ ಏಕತ್ವವನೆಯ್ದಿರ್ಪನು.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಾಮೃತದ ಬೆಡಗಿನ ವಚನದ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ- ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ – ಡಂಬಳ- ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಬಸವಣ್ಣನ ನೆನೆನೆನೆದು ನೀವು ಸುಖಿಸುವಿರಯ್ಯಾ
ನಿಮ್ಮ ನೆನೆನೆನೆದು ನಾನಯ್ಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮನರಿದವಗೆ ಯಾವುದರ ಭಯವಿಲ್ಲ
ನಿಮ್ಮನರಿಯದವಗೆ ಎಲ್ಲದರ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪಂಚಾಚಾರಮೂರ್ತಿ ಆಚಾರಲಿಂಗವೆ
ಪಂಚಬ್ರಹ್ಮವನೊಳಕೊಂಡ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಸಿವಿನಲಿ ಶಿವನಿಹುದ ತುಸುವಾದರು ನೀಕಾಣು
ರಸೆತುಂಬ ಹಸಿವೇ ಹರಡಿಹುದು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತೃಪ್ತಿ ತುರೀಯವೆ ಸಂತೃಪ್ತಿ ವಿಶ್ರಾಮವೆ
ತೃಪ್ತಿಯಾನಂದ ಪರಮವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಜ್ಯೋತಿ ಜ್ಯೋತಿಯ ಕೂಡಿ ಭಿನ್ನದೋರದಹಾಗೆ'
ಜ್ಯೋತಿ ಬಸವನೊಳು ಒಡಬೆರೆದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಾವ ಕ್ರಿಯಾಚಾರಿ ನಿಷ್ಠಜ್ಞಾನಾಚಾರಿ
ಸೇವಾ ಭಾವಾಚಾರಿ ಘನಲಿಂಗ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಚಾರಶಿವನಿಧಿಯೆ ಸಾಕಾರ ಶಿವರೂಪ
ಮಾನವ್ಯಮಂಗಳದ ಜಯದಿವ್ಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸುಜ್ಞಾನ ಚಂದಿರಶಿವಜ್ಞಾನ ಸುಂದರ
ದಾಸೋಹಮಣಿಹದ ಭಾಸ್ಕರ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗ್ರಾಮಬಂಧುಗಳಿಗೆ ಬಸವದರುಶನಗೈದೆ
ಬಸವನಾಟಕವ ಕಾಣಿಸಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ









# ಇಸ್ಲಾಂ ಹಾಗೂ ವೀರಶೈವ ಸಂಸ್ಕೃತಿ – ಒಂದು ಚಿಂತನೆ

–ಪ್ರೊ. ಡಿ. ಜವರೇಗೌಡ *

**ಹ**ನ್ನೆರಡನೆಯ ಶತಮಾನದಲ್ಲಿ ಬದುಕಿ ವಿಶ್ವವಿಭೂತಿಯೆಂದು ಭಕ್ತಿಭಂಡಾರಿಯೆಂದು ಹೆಸರುಗೊಂಡ ಬಸವೇಶ್ವರರು ಮಹಮ್ಮದರಂತೆ ಲೋಕಕಲ್ಯಾಣಾರ್ಥವಾಗಿ ವೀರಶೈವ ಮತವನ್ನು ಸಂಸ್ಥಾಪಿಸುತ್ತಾರೆ. ಹಲವು ದೈವಗಳನ್ನು ನಂಬಿಕೊಂಡು, ಹಲವು ಜಾತಿಗಳನ್ನು ಕಲ್ಪಿಸಿಕೊಂಡೂ, ಈ ದೇಶದ ಒಗ್ಗಟ್ಟು ಹುಡಿಯಾಗಿ ಅದು ಪರಕೀಯರ ಪಾಲಾಗಿ, ವಿನಾಶದ ಅಂಚನ್ನು ಮುಟ್ಟಿತೆಂಬ ವಾಸ್ತವ ಸತ್ಯವನ್ನು ಕಂಡುಕೊಂಡ ಅವರು ಏಕದೇವತೋಪಾಸನೆಯ ಮತ್ತು ಇಷ್ಟಲಿಂಗ ಪೂಜೆಯ ಆಧಾರದ ಮೇಲೆ ಹೊಸ ಸಮಾಜವನ್ನು ನಿರ್ಮಿಸಲು, ಹೊಸ ಸಂಸ್ಕೃತಿಯನ್ನು ಬೆಳೆಸಲು ಸಾಧನಾ ನಿರತರಾಗುತ್ತಾರೆ. ವೇದಗಳಂತೆ ಕುರಾನ್ ಅಪೌರುಷೇಯವಾದದ್ದು, ಭಗವಂತನೇ ಹೇಳಿದ್ದು. ವೀರಶೈವ ಧರ್ಮಕ್ಕೆ ಆಧಾರವಾದ ಬಸವೇಶ್ವರನ ವಚನಗಳು ಅಪೌರುಷೇಯವೆಂದು, ಶಿವನೇ ಹೇಳಿದ್ದೆಂದು ಎಲ್ಲಿಯೂ ಸ್ಪಷ್ಟಪಡಿಸಿಲ್ಲ. ಆದರೆ ದೇಹ ದೇಗುಲದಲ್ಲಿ ವಾಸಿಸುತ್ತಿರುವ ಶಿವಶಕ್ತಿಯೇ ಭಕ್ತನ ಮೂಲಕ ಮಾತಾಡುತ್ತಾದೆಂಬುದು ಶಿವಶರಣರ ನಂಬಿಕೆ. ಬೈಬಲ್ಲು ಕುರಾನಿನ ಹಿನ್ನಲೆಯಲ್ಲಿ ದ್ದರೂ, ಕುರಾನ್ ಅನೇಕಾಂಶಗಳಲ್ಲಿ ಅದಕ್ಕಿಂತ ತೀರ ಭಿನ್ನ. ಬಸವೇಶ್ವರರು ಬ್ರಾಹ್ಮಣ ಜಾತಿಯಲ್ಲಿ ಜನಿಸಿದ್ದರೂ, ಅದು ಸಮಾಜದ ಹಾಗೂ ದೇಶದ ಅವನತಿಗೆ ಮೂಲ ಕಾರಣವೆಂಬುದನ್ನಿರಿತು, ಅದನ್ನು ತ್ಯಜಿಸಿ, ಅದಕ್ಕೆ ವಿರುದ್ಧ ವಾಗಿ ಸೆಟೆದು ನಿಂತದ್ದಲ್ಲದೆ, ಅದನ್ನು ಪೋಷಿಸುತ್ತಿದ್ದ ವೇದಾಗಮಶಾಸ್ತ್ರ ಪುರಾಣಗಳನ್ನು ಸಹ ತಿರಸ್ಕರಿಸಿದ ರೆನ್ನುವುದು ಗಮನಾರ್ಹವಾದ ಅಂಶ. ಬೇರು ಹೋಗದೆ ಮರ ನಾಶವಾಗುವುದಿಲ್ಲವೆಂಬ ಸತ್ಯ ಅವರಿಗೆ ಗೊತ್ತಿತ್ತು. ಹಳೆಯ ಧರ್ಮವಳಿಯದೆ ಹೊಸ ಧರ್ಮ ತಲೆಯೆತ್ತು ವಂತಿಲ್ಲ, ತಲೆಯೆತ್ತಿದರೂ ಉಳಿಯುವಂತಿಲ್ಲವೆಂಬ ವ್ಯವಹಾರ ಬುದ್ಧಿಯೂ ಅವರಲ್ಲಿ ವಿಶೇಷವಾಗಿತ್ತು.

ಧಾರ್ಮಿಕ ಕ್ರಾಂತಿಯಾಗದೆ ಸಮಾಜಿಕ ಕ್ರಾಂತಿಯಾಗಲಿ ರಾಜಕೀಯ ಸ್ಥಿರತೆಯಾಗಲಿ, ರಾಷ್ಟ್ರೈಕ್ಯವಾಗಲಿ ಸಾಧ್ಯವಾಗ ಲಾರದೆಂಬ ಮುನ್ನರಿವು ಅವರಿಬ್ಬರಿಗೂ ಮನದಟ್ಟಾಗಿತ್ತು. ಆದ್ದರಿಂದಲೇ ಅವರಿಬ್ಬರೂ ಧಾರ್ಮಿಕ ಕ್ರಾಂತಿಗೆ ಆದ್ಯತೆ ನೀಡುತ್ತಾರೆ. ಜಾತಿ ಲಿಂಗ ವರ್ಣ ವರ್ಗ ವೃತ್ತಿ ಭೇದವಿಲ್ಲದ ಸರ್ವ ಸಮಾನತೆ ಹಾಗೂ ಸರ್ವಕ್ಷೇಮ ಅವರು ಕೈಗೆತ್ತಿ ಕೊಂಡ ಧಾರ್ಮಿಕ ಕ್ರಾಂತಿಯ ಹೆಗ್ಗುರಿ. ಧರ್ಮಯುದ್ಧದಿಂದಾದರೂ ಅದನ್ನು ಸಾಧಿಸಬೇಕೆಂಬುದು ಮಹಮ್ಮದರ ಮಾರ್ಗವಾದರೆ, ಅಹಿಂಸಾ ಮಾರ್ಗದ ಮೂಲಕವೇ ಅದನ್ನು ಸಾಧಿಸಬೇಕೆಂಬುದು ಬಸವೇಶ್ವರರ ವಿಚಾರ. 'ದಯವಿಲ್ಲದ ಧರ್ಮವುದೇವುದಯ್ಯಾ' ಎಂಬ ಸೂತ್ರದಲ್ಲಿ ಅವರಿಗೆ ಅಚಲ ವಿಶ್ವಾಸ. ಬಸವಣ್ಣನವರು ಎದುರಿಸಬೇಕಾಗಿದ್ದ ಜಾತಿ ಸಂಬಂಧ ವಾದ ಕಷ್ಟ ಕ್ಲೇಶ ವಿಘ್ನ ಪೀಡೆಗಳು ಆ ಪ್ರಮಾಣದಲ್ಲಿ, ಅಷ್ಟು ತೀವ್ರವಾಗಿ ಮಹಮ್ಮದರ ಮುಂದಿರಲಿಲ್ಲವೆಂದು ತೋರುತ್ತದೆ. ಸಾವಿರಾರು ಜಾತಿಗಳನ್ನು ಒಂದುಗೂಡಿಸಬೇಕಾದ ಕಷ್ಟತಮವಾದ ಮಹತ್ಕಾರ್ಯ ಒಂದು ಕಡೆಯಾದರೆ, ಆ ಮಹತ್ಕಾರ್ಯ ಕೈಗೂಡದಂತೆ ವಿಘ್ನಗಳೊಡ್ಡುವ ಉತ್ತಮ ವರ್ಗದವರ ಕುಹಕ ಕುಯುಕ್ತಿ ಕುಚೇಷ್ಟೆ ಮತ್ತೊಂದು ಕಡೆ. ಜಾತೀಯತೆ ಅಸ್ಪೃಶ್ಯತೆಗಳನ್ನು ನಿರ್ಮೂಲ ಮಾಡುವುದೇ ಅವರು ಸ್ಥಾಪಿಸಿದ ನವೀನ ಧರ್ಮದ ಆಣಿಗುರಿ. ಆಧ್ಯಾತ್ಮ ಸಿದ್ಧಿಯೊಂದೇ ಅವರ ಗುರಿಯಾಗಿದ್ದರೆ, ಹೊಸ ಧರ್ಮದ ಅಗತ್ಯವಿರಲಿಲ್ಲ. ಆಧ್ಯಾತ್ಮಸಿದ್ಧಿಯೊಂದೇ ಇಷ್ಟಲಿಂಗಪೂಜೆಯ ಗುರಿ ಎನ್ನುವುದಾದರೆ, ಅದರ ಮಹತ್ವ ವನ್ನು ಹಾಗೂ ವ್ಯಾಪ್ತಿಯನು ಸೀಮಿತಗೊಳಿಸಿದಂತಾಗುತ್ತದೆ; ಆ ಸಿದ್ಧಿಗಿಂತ ಮಿಗಿಲಾದದ್ದು ಜಾತಿ ನಿರ್ಮೂಲನ ಮೂಲಕದ ಸಾಮಾಜಿಕ ಕ್ರಾಂತಿ.

ಲಿಂಗದೀಕ್ಷೆಯ ನಂತರ ಎಲ್ಲ ಭೇದಗಳು ಅಳಿದು ಹೋಗಿ, ಸರ್ವಸಮತಾ ಭಾವ ನೆಲೆಗೊಳ್ಳಬೇಕೆಂದು ಬಸವಣ್ಣನವರ ಆಶಯ. ಪರುಷ ಮುಟ್ಟಿದ ಬಳಿಕ ಕಬ್ಬಿಣ ಹೊನ್ನಾಗುವುದುಂಟಷ್ಟೆ. ಅಂತೆಯೇ ಲಿಂಗಸ್ಪರ್ಶವಾದೊಡನೆಯೆ ಜಾತಿ ಸೂತಕವಳಿದು ಎಲ್ಲರೂ ಕುಲಜರಾಗುತ್ತಾರೆಂದು ಅವರ ಶಾಸನ. ಇಂಥ ಶಾಸನವಿದ್ದಾಗಲೂ ಕೆಲವು ಲಿಂಗಧಾರಿಗಳಲ್ಲಿ ಮೇಲು ಕೀಳಿನ ಭಾವನೆಯಿದ್ದದ್ದು ಬಸವಣ್ಣನವರ ಮನಸ್ಸಿಗೆ ನೋವುಂಟುಮಾಡಿರಬೇಕು. ಆಗವರು **'ಪಟ್ಟವ ಕಟ್ಟಿದ ಬಳಿಕ ಲಕ್ಷಣವನರಸುವರೆ? ಲಿಂಗದೇವನ ಪೂಜಿಸಿ ಕುಲವನರಸುವರೆ, ಅಯ್ಯಾ** ಎಂದು ಸಂಕಟ ಪಡುತ್ತಾರೆ. ಮಹಮ್ಮದರ ಹಾಗೆ ಬಸವಣ್ಣನವರೂ ವೃತ್ತಿಗೌರವಕ್ಕೆ ವಿಶೇಷವಾಗಿ ಒತ್ತು

* ಮಾಜಿ ಉಪ ಕುಲಪತಿಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಕೊಡುತ್ತಾರೆ. ಲಿಂಗಧಾರಿಯಾದವನು ಮೋಚಿಯಾದರೂ ಮಂತ್ರಿಗೆ ಸಮ ಎನ್ನುವುದು ಅವರ ನಿಲುವು. '**ದೇವ ಸಹಿತ ಭಕ್ತ ಮನೆಗೆ ಬಂದಡೆ ಕಾಯಕವಾವುದೆಂದು ಬೆಸೆಗೊಂಡೆನಾದಡೆ ನಿಮ್ಮಾಣೆ! ನಿಮ್ಮ ಪುರಾತನರಾಣೆ**' ಎಂದವರು ಪ್ರತಿಜ್ಞೆ ತೊಡುತ್ತಾರೆ. 'ಕಷ್ಟ ಜಾತಿಯ ಜನ್ಮದಲ್ಲಿ ಜನಿಸಿದೆ' ಎಂದು ಕೊರಗುದಲ್ಲಿ, ಮಾದರ ಚನ್ನಯ್ಯ ಅಪ್ಪ, ಡೋಹರ ಕಕ್ಕಯ್ಯ ಬೊಪ್ಪ ಎಂದು ಹೇಳಿಕೊಂಡು ಸಮಾಧಾನಪಟ್ಟುಕೊಳ್ಳು ವಲ್ಲಿ ಜಾತೀಯತೆಯ ಬಗೆಗಿನ ಅವರ ಧೋರಣೆ ವ್ಯಕ್ತವಾಗುತ್ತದೆ. ಮತಾಂತರದ ನಂತರ ಇಸ್ಲಾಂ ಧರ್ಮದಲ್ಲಿಯೂ ವೀರಶೈವ ಧರ್ಮದಂತೆ ಯಾವ ವಿಧವಾದ ಭೇದ ಭಾವನೆಗೂ ಅವಕಾಶವಿಲ್ಲ.

ತಾವು ಕಲ್ಪಿಸಿಕೊಂಡಿರುವ ದೇವರು ಅಗಮ್ಯ, ಅಗೋಚರ, ಅಪ್ರತಿಮ, ಅನುಪಮ, ಅದ್ವಿತೀಯ, ಸೃಷ್ಟಿಕರ್ತ, ಸರ್ವಶಕ್ತ, ಸರ್ವಜ್ಞ, ಏಕೈಕ ಪ್ರಭು ಎಂಬುದು ಈ ಇಬ್ಬರು ಮಹಾಪುರುಷರ ಸಮ ಭಾವನೆ. ಅಲ್ಲಾಹನಿಗಾಗಲಿ ಶಿವನಿಗಾಗಲಿ ಜನನ ಮರಣಗಳಿಲ್ಲ. ಅನ್ಯದೇವರೊಡನೆ ಅವರನ್ನು ಹೋಲಿಸುವುದಾದರೆ ಇಬ್ಬರೂ ವೀರಭದ್ರರಾಗುತ್ತಾರೆ. ಹರಿಹರನೊಂದೆ ಎಂದಡೆ ಸುರಿಯುವೆ ಬಾಯಲ್ಲಿ ಬಾಲಹುಳುಗಳು? '**ಕರ್ತಾರನ ಪೂಜಿಸಿ ಕುಚ್ಚಿತ ದೈವಕ್ಕೆರಗುವರು ಕತ್ತೆ ಕುದುರೆಗೆ ಹುಟ್ಟಿದ ವೇಸರನಂತೆ!** ಎಂಬ ಬಸವೇಶ್ವರರ ಕಠೋರ ವಾಕ್ಯಗಳಲ್ಲಿ ಮಹಮ್ಮದರ ವಾಣಿ ಮಾರ್ದನಿಸುತ್ತದೆಂದರೆ ತಪ್ಪಾಗದು.

ವೀರಶೈವ ಧರ್ಮದ ಅಂಗಗಳು ನಾಲ್ಕು: ಆಚಾರಾಂಗ, ದರ್ಶನಾಂಗ, ಆಧ್ಯಾತ್ಮಾಂಗ, ಲೌಕಿಕಾಂಗ, ಅಷ್ಟಾವರಣ, ಷಟ್ಸ್ಥಲಸಿದ್ಧಾಂತ, ಏಕದೇವೋಪಾಸನೆ ಮತ್ತು ಕಾಯಕ ದಾಸೋಹಗಳಲ್ಲಿ ಈ ಅಂಗಗಳ ಆಕರಗಳನ್ನು ಕಾಣ ಬಹುದು. ಕೇವಲ ಅಧ್ಯಯನದ ಸೌಲಭ್ಯಕ್ಕಾಗಿ ಈ ಅಂಗ ಗಳನ್ನು ವಿಂಗಡಿಸಿದೆಯಾದರೂ, ಅವು ಅಪ್ರತ್ಯೇಕವೆಂಬು ದನ್ನು ಮರೆಯಲಾಗದು. ಕೈಕಾಲು ಕಣ್ಣು ಮೊದಲಾದ ಅಂಗಗಳು ಸೇರಿ ಶರೀರವಾಗುವಂತೆ, ಮೇಲಣ ನಾಲ್ಕು ಅಂಗಗಳು ಸೇರಿ ವೀರಶೈವ ಧರ್ಮವಾಗುತ್ತದೆ. ವೀರಶೈವ ಧರ್ಮ ಜೀವನವನ್ನು ಇಡಿ ಇಡಿಯಾಗಿ, ಅಖಂಡವಾಗಿ ಗ್ರಹಿಸುತ್ತದೆಯೇ ಹೊರತು ಬಿಡಿ ಬಿಡಿಯಾಗಿ ಅಲ್ಲ. ಖಂಡ ಖಂಡವಾಗಿ ಅಲ್ಲ. ಲೌಕಿಕ ಜೀವನ ಪರಮಾರ್ಥಸಿದ್ಧಿಗೆ ಏಣಿಯೆಂಬುದಾಗಿ ಇಸ್ಲಾಂ ವೀರಶೈವ ಧರ್ಮಗಳೆರಡೂ ನಂಬುತ್ತವೆ. ಮಾಯೆಯೆಂಬ ಕಲ್ಪನೆಯೇ ಈ ಧರ್ಮಗಳಿಗೆ ಪರಕೀಯ. ಜಗತ್ತೆಲ್ಲವೂ ಭಗವಂತನ ಸೃಷ್ಟಿಯಾದ್ದರಿಂದ, ಸೃಷ್ಟಿಕರ್ತ ತನ್ನ ಸೃಷ್ಟಿ ಯಲ್ಲಿ ಸೇರಿಕೊಂಡಿರುತ್ತಾನಾದ್ದರಿಂದ, ಜಗತ್ತಿನಲ್ಲಿದ್ದು ಕೊಂಡೇ ಮಾನವ ತನ್ನೆಲ್ಲ ಸಿದ್ಧಿಯನ್ನು ಸಾಧಿಸಬೇಕಾಗಿರು ವುದರಿಂದ, ಅದು ಮಾಯೆಯೂ ಅಲ್ಲ, ಭ್ರಮೆಯೂ ಅಲ್ಲ. ಅದು ಮಾಯೆಯನ್ನುವುದಾದರೆ, ಮಾನವನ ಅಸ್ತಿತ್ವವಾಗಲಿ ಭಗವಂತನ ಅಸ್ತಿತ್ವವಾಗಲಿ ಮಾಯೆಯೆನ್ನ ಬೇಕಾಗುತ್ತದೆ. ಆಗ ಯಾರೂ ಆ ಮಾಯೆಯೆನ್ನಟ್ಟಿಕೊಂಡು ಹೋಗಬೇಕಾಗಿಲ್ಲ. ಲೌಕಿಕಾರ್ಥವಾಗಲಿ ಪಾರಮಾರ್ಥ ವಾಗಲಿ ವಿಭಿನ್ನ ಸಂಗತಿಗಳಲ್ಲ; ಅವೆರಡೂ ಒಂದೇ ತತ್ತ್ವದ ಎರಡು ಮುಖಗಳು ಅಥವಾ ಎರಡು ಕೊನೆಗಳು. ಶಿವ ಶಕ್ತಿಗಳ ಹಾಗೂ ಲಿಂಗಾಂಗಗಳ ಸಾಮರಸ್ಯ ರಹಸ್ಯಗಳನ್ನರಿಯಲು ದರ್ಶನಾಂಗದ ಜ್ಞಾನ ಅಗತ್ಯ; ಶಿವನ ಕಡೆಗೆ ಗಮನ ಹರಿಸುವಲ್ಲಿ, ಅವನಲ್ಲಿಯೇ ಏಕಾಗ್ರತೆಯನ್ನು ಸಾಧಿಸುವ ಸಲುವಾಗಿ, ಶ್ರದ್ಧೆ ನಿಷ್ಠೆಗಳನ್ನು ಎಚ್ಚರಗೊಳಿಸ ಲೋಸುಗ ಆಚಾರಾಂಗದ ಅನುಸರಣೆ ಅವಶ್ಯಕ. ತನ್ನ ಪಾತ್ರವನ್ನಾಡಿ ಮುಗಿಸಿದ ಪಾತ್ರಿ ನೇಪಥ್ಯದಲ್ಲಿ ಮರೆಯಾಗು ವಂತೆ, ಬಯಲ ಸಾಧಿಸಿದ ನಂತರ ಕುರುಹು, ಕುರುಹಿನ ಜತೆಯಲ್ಲಿ ಆಚಾರವೂ ಹಿಂಜರಿಯುತ್ತವೆ. ಸಮರತಿ, ಸಮಕಳೆ, ಸಮಸುಖ, ಸ್ವಾನುಭಾವಗಳನ್ನು ಸಾಧಿಸಿದ ನಂತರ ಲಿಂಗಪೂಜೆ ತಾನಾಗಿಯೇ ನಿಂತು ಹೋಗುತ್ತದೆ. 'ಕಂಗಳು ತುಂಬಿದ ಬಳಿಕ ನೋಡಲಿಲ್ಲ.... ಮನತುಂಬಿದ ಬಳಿಕ ನೆನೆಯಲಿಲ್ಲ...' ಇದು ಶರಣನ ಅದ್ವೈತ ಸ್ಥಿತಿ. ಲೋಕ ಕಲ್ಯಾಣಕ್ಕಾಗಿ, ಮಾನವನ ನಿಃಶ್ರೇಯಸಕ್ಕಾಗಿ ವೀರಶೈವ ಧರ್ಮ ಜಗತ್ತಿಗೆ ನೀಡಿದ ಎರಡು ಅಮೂಲ್ಯ ತತ್ತ್ವಗಳೆಂದರೆ ಕಾಯಕ ದಾಸೋಹಗಳು. ಆಚಾರಾಂಗ ದರ್ಶನಾಂಗ ಗಳನ್ನು ಮರೆತರೂ ಇವುಗಳ ದೃಢಾಲಿಂಗನದ ಮೂಲಕ ಆಧ್ಯಾತ್ಮ ಸಿದ್ಧಿಯನ್ನು ಪಡೆಯಬಹುದಾಗಿದೆ. ಈ ಅವಳಿ ತತ್ವಗಳಲ್ಲಿ ಈ ಲೌಕಿಕಾಂಗದಲ್ಲಿ–ಉಳಿದೆಲ್ಲ ಅಂಗಗಳು ಅನುಸ್ಯೂತವಾಗಿ ಸೇರಿಕೊಂಡಿವೆ ಎಂದಾಗಲಿ, ಆ ಚತುರಂಗಗಳ ನಡುವೆ ಎಡೆಯಿಲ್ಲವೆಂದಾಗಲಿ ಭಾವಿಸುವುದೇ ಲೇಸೆನಿಸುತ್ತದೆ. ಅನ್ನಮಯ ಕೋಶದಿಂದ ಆನಂದಮಯ ಕೋಶದ ತನದ ಯಾತ್ರೈಯುವುದೆ ಮಾನವ ಯಾತ್ರಿಯ ಪರಮ ಚರಮ ಗುರಿ. ಕಾಯಕ ದಾಸೋಹಗಳ ಮೂಲಕ ಆ ಗುರಿಯನ್ನು ಸಾಧಿಸ ಬಹುದು; ಅವುಗಳ ಮೂಲಕ ಕಾಯಸ್ವಾಸ್ಥ್ಯ ಮನಶುದ್ಧಿ ಗಳನು ಸಾಧಿಸುವುದರ ಜತೆಗೆ, ಲಿಂಗಾಂಗ ಸಾಮರಸ್ಯವನ್ನು ಸಹ ಎಟುಕಿಸಬಹುದೆಂದು ವೀರಶೈವ ಧರ್ಮ ಸ್ಪಷ್ಟಪಡಿಸುತ್ತದೆ.





ಪ್ರವಾದಿಯಲ್ಲದವನು, ಸಂತನಲ್ಲದವನು ಜಗವನ್ನಾಗಲಿ ಜನವನ್ನಾಗಲಿ ಆಕರ್ಷಿಸಲಾರನೆಂಬ ಸತ್ಯವನ್ನು ಇತಿಹಾಸ ಘೋಷಿಸುತ್ತದೆ. ಪ್ರವಾದಿ ಮಹಮ್ಮದರನ್ನು ಕಂಡವರು, ಕೇಳಿದವರು ಅವರ ಸ್ವಚ್ಛ ಸರಳ ಸಚ್ಚಾರಿತ್ರ್ಯ ಜೀವನದ, ಅವರ ಸ್ವರೂಪ ಸ್ವಭಾವ ಸಾಧನೆ ಸಿದ್ಧಿಗಳ ದಾಖಲೆಯನ್ನು ಬಿಟ್ಟು ಹೋಗಿದ್ದಾರೆ. ಕುರಾನ್ ಮತ್ತು ಹದೀಸ್‌ಗಳಿಂದಲೂ ಅವರ ಹಿರಿಮೆ ಮಹಿಮೆಗಳು ಪ್ರಕಟವಾಗುತ್ತವೆ. ಪ್ರತ್ಯಕ್ಷ ದರ್ಶಿಗಳು ಮತ್ತು ಅನುಯಾಯಿಗಳು ಬಸವಣ್ಣನವರ ಜೀವನ ಹಾಗೂ ಅವರ ಚಾರಿತ್ರ್ಯದ ಬಗ್ಗೆ ಮಾಸದ ಬೆಳಕನ್ನು ಚೆಲ್ಲಿದ್ದಾರೆ. ಅವರ ವಚನಗಳಂತು ಅವರ ಸ್ವಭಾವಕ್ಕೆ ಹಾಗೂ ಅವರ ವ್ಯಕ್ತಿತ್ವಕ್ಕೆ ಎತ್ತಿ ಹಿಡಿದ ದರ್ಪಣಗಳಾಗಿವೆ. ಅವರ ನಂತರ ಹುಟ್ಟಿಕೊಂಡ ಈಗಲೂ ರಚನೆಗೊಳ್ಳುತ್ತಿರುವ ಜೀವನ ಚರಿತ್ರೆಗಳು, ಕಾವ್ಯ ಮಹಾಕಾವ್ಯಗಳು, ಕಾದಂಬರಿ ಗಳು, ವ್ಯಾಖ್ಯಾನಗಳು, ಜಾನಪದ ಕೃತಿಗಳು ಅವರ ಮಹಿಮೆಯನ್ನು, ಚಿರಂತನತೆಯನ್ನು, ಅವರ ಸರ್ವಕಾಲಗಳಲ್ಲಿಯೂ ಪ್ರಸ್ತುತವೆನ್ನುವುದನ್ನು ತೋರಿಸುತ್ತವೆ. ಈ ಮಾತು ಮಹಮ್ಮದರ ಬಗೆಗೂ ನಿಜವೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ತಪಸ್ಸಿನಿಂದ ಆಧ್ಯಾತ್ಮ ಸಿದ್ಧಿಯಿಂದ ಸಂಲಬ್ಧವಾದ ಅಂತಸ್ಸೌಂದರ್ಯವೆಂತೊ ಅಂತೆಯೆ ಹುಟ್ಟಿನಿಂದ ಬಂದ, ಆಧ್ಯಾತ್ಮ ಕಾಂತಿಯಿಂದ ಪುಟಗೊಂಡ ಅವರ ಬಾಹ್ಯ ಸೌಂದರ್ಯವೂ ಹತ್ತಿರದ ಹಾಗೂ ದೂರದ ಶರಣ ಭ್ರಮರಗಳ ಆಕರ್ಷಣೆಗೆ ಕಾರಣವಾಗಿತ್ತೆಂಬುದರಲ್ಲಿ ಸಂದೇಹವಿಲ್ಲ. ಅವರ ಕೀರ್ತಿಯನ್ನು ಕೇಳಿ, ಅವರ ಸಾನ್ನಿಧ್ಯ ವನ್ನು ಸೇರಿದ ಭವಿಗಳು ಅವರ ವಚನಾಮೃತವನ್ನು ಸವಿದು, 'ಅವರ ಚಾರಿತ್ರ್ಯವನ್ನನುಕರಿಸಿ ಶರಣರಾಗುತ್ತಾರೆ, ಶಿವಕಾಯರಾಗುತ್ತಾರೆ. '**ಬಸವನಾಮವು ಕಾಮಧೇನು ಕಾಣಿರೊ, ಬಸವನ ನಾಮವು ಕಲ್ಪವೃಕ್ಷ ಕಾಣಿರೊ, ಬಸವನ ನಾಮವು ಕಲ್ಪವೃಕ್ಷ ಕಾಣಿರೊ, ಬಸವನ ನಾಮವು ಚಿಂತಾಮಣಿ ಕಾಣಿರೊ, ಬಸವನ ನಾಮವು ಪರುಷದ ಖಣಿ ಕಾಣಿರೊ, ಬಸವನ ನಮವು ಸಂಜೀವನ ಮೂಲಿಕೆ ಕಾಣಿರೊ**' ಎಂದು ಷಣ್ಮುಖಸ್ವಾಮಿ ಬಸವಣ್ಣನವರನ್ನು ಕೊಂಡಾಡುತ್ತಾರೆ. 'ನಿಮ್ಮ ಶರಣ ಬಸವಣ್ಣನಿದ್ದ ಕ್ಷೇತ್ರವೇ ಅವಿಮುಕ್ತ ಕ್ಷೇತ್ರ'ವೆಂದು, 'ಎನ್ನ ಹೆತ್ತ ತಂದೆ ಸಂಗನ ಬಸವಣ್ಣ' ಎಂದು ಮಹಾದೇವಿಯಕ್ಕ ಬಸವಣ್ಣನವರ ಪಾದಕ್ಕೆ ನುಡಿ ಹೂಗಳನ್ನರ್ಪಿಸುತ್ತಾಳೆ. 'ಕಲ್ಯಾಣವೆಂಬುದಿ ನ್ನಾರಿಗೂ ಹೋಗಬಾರದು ಅಸಾಧ್ಯವಯ್ಯ; ಆಶೆ ಅಮಿಷವನಳಿದವರಿಗಲ್ಲದೆ ಕಲ್ಯಾಣದತ್ತಲಡಿಯಿಡಬಾರದು; ಒಳಗು ಹೊರಗು ಶುದ್ಧವಾದಂಗಲ್ಲದೆ ಕಲ್ಯಾಣವ ಹೊಗಬಾರದು' ಎಂಬ ಅಕ್ಕನ ರೂಪಕ ವಾಕ್ಯಗಳು ಕಲ್ಯಾಣದ ಅಧಿಷ್ಠಾತೃವಾದ ಬಸವಣ್ಣನರಿಗೂ ಅನ್ವಯಿಸುತ್ತದೆ. 'ಗುರುಲಿಂಗಾದಡೆಯು ಬಸವಣ್ಣನೆ ಬೇಕು;ಲಿಂಗಕ್ಕಾದಡೆಯೂ ಬಸವಣ್ಣನೆ ಬೇಕು; ಜಂಗಮಕ್ಕಾದಡೆಯೂ ಬಸವಣ್ಣನೆ ಬೇಕು; ಕಪಿಲಸಿದ್ಧಮಲ್ಲಿಕಾರ್ಜುನಯ್ಯ, ನಿಮಗೂ ಎನಗೂ ನಿಮ್ಮ ಶರಣನಿಗೂ ಬಸವಣ್ಣನೆ ಬೇಕು ' ಎಂದು ಸಿದ್ಧರಾಮಯ್ಯ ತನ್ನ ಭಕ್ತಿಕುಸುಮವನ್ನು ನಿವೇದಿಸುತ್ತಾನೆ. 'ಗೊಹೇಶ್ವರ ಲಿಂಗದಲ್ಲಿ ಎನ್ನ ಪರಮಾರಾಧ್ಯ ಸಂಗನ ಬಸವಣ್ಣನ ಕಂಡು ಬದುಕಿದೆ ಕಾಣಾ ಸಿದ್ಧರಾಮಯ್ಯ' ಎಂದು ಪ್ರಭುದೇವರು ಬಸವಣ್ಣನಿಗೆ ತಮ್ಮ ಗೌರವವನ್ನು ಸಲ್ಲಿಸುತ್ತಾರೆ. ಸಮಕಾಲೀನ ಶರಣರಂತೆ ಇಂದಿನ ಕವಿಗಳು ಸಹ ಬಸವಣ್ಣನವರ ಸಾಹಸ ಸಿದ್ಧಿಗಳನ್ನು ಕೊಂಡಾಡಿದ್ದಾರೆ. ಪ್ರಾಯಶಃ ಬುದ್ಧ ಕ್ರಿಸ್ತರ ನಂತರ ಆಪಾರ ಲೋಕಸ್ತುತಿಗೆ ಪಾತ್ರರಾದ ಮಹಾಪುರುಷರೆಂದರೆ ಬಸವೇಶ್ವರರೊಬ್ಬರೇ ಎಂದು ಕಾಣುತ್ತದೆ.

ಗೌರವಾಕರ್ಷಣೆಯಲಿ ಮಹಮ್ಮದರು ಅವರಿಗೇನೂ ಕಡಿಮೆಯಿಲ್ಲ; ಒಂದು ಕೈ ಅವರಿಗಿಂತ ಮಿಗಿಲೆಂದೇ ಹೇಳಬಹುದು. ವ್ಯಕ್ತಿಪೂಜೆ ಸಲ್ಲದೆಂಬ, ಆಲಾಹ್‌ನೊಬ್ಬನೆ ಸ್ತುತಿಗರ್ಹನೆಂಬ, ಮಹಾಪ್ರಭುವಿನ ಗುಣಲಕ್ಷಣಗಳನ್ನು ಬೇರೆಯವರಿಗೆ ಆರೋಪಿಸಬಾರದೆಂಬ ಇಸ್ಲಾಂ ಧರ್ಮದ ನಿಯಮಗಳು ಅಡ್ಡಬರುವ ಕಾರಣದಿಂದ ಅವರ ಬಗೆಗಿನ ಸ್ತುತಿ ವಿರಳವೆಂದೇ ಹೇಳಬೇಕು. ಅಲ್ಲಾಹ್ ನಿರಾಕಾರನಾದ್ದರಿಂದ ಮೂರ್ತಿಪೂಜೆ ವಿಗ್ರಹಾರಾಧನೆಯನ್ನು ಸಹ ಇಸ್ಲಾಂ ಧರ್ಮ ಬಹಿಷ್ಕರಿಸುತ್ತದೆ. ಖಚಿತವಾಗಿ ಹೇಳುವುದಾದರೆ ವಿಗ್ರಹಾರಾಧನೆಯನ್ನು ವೀರಶೈವ ಧರ್ಮವೂ ತಿರಸ್ಕರಿಸುತ್ತದೆ. ಪುರೋಹಿತಶಾಹಿಯ ಹಿಡಿತದಿಂದ, ಬ್ರಾಹ್ಮಣ ಜಾತಿಯ ಸೆರೆಯಿಂದ ಬಿಡುಗಡೆಹೊಂದುವ ಸಲುವಾಗಿ ಬಸವಣ್ಣನವರು ಸ್ಥಾವರ ಲಿಂಗಪೂಜೆಗೆ ಬದಲಾಗಿ ಇಷ್ಟಲಿಂಗ ಪೂಜೆಯನ್ನು ಪ್ರೋತ್ಸಾಹಿಸುತ್ತಾರೆ. ವಾಸ್ತವವಾಗಿ ಲಿಂಗವೆಂಬುದು ಮೂರ್ತಿಯಲ್ಲ; ನಿರಾಕಾರ ತತ್ತ್ವಕ್ಕೆ ಅದೊಂದು ಸಂಕೇತ. ಆದ್ದರಿಂದ ಮೂರ್ತಿಪೂಜೆಯಾಗಲಿ, ದೇವಾಲಯ ಸಂಸ್ಕೃತಿಯಾಗಲಿ ವೀರಶೈವಕ್ಕೆ ವಿರುದ್ಧ ವೆಂದೇ ಹೇಳಬೇಕು. ಬಸವೇಶ್ವರ ಮತ್ತು ಪ್ರಭುದೇವರ ವಚನಗಳಲ್ಲಿ ಈ ಮಾತಿಗೆ ಅನೇಕ ನಿದರ್ಶನಗಳು ದೊರೆಯುತ್ತವೆ.

*



## ತಾಯಿ ಎಂದರೆ ಏನು ?

–ಡಾ॥ ಪಂಚಾಕ್ಷರಿ ಹಿರೇಮಠ *

ತಾಯಿ ಅಂದರೆ ಅದಕ್ಕೆ ಪರ್ಯಾಯವಾದುದು ಯಾವುದೂ ಇಲ್ಲ. ತಾಯಿಗೆ ತಾಯಿಯನ್ನೇ ಹೋಲಿಸುವುದು.

ತಾಯಿ ಎಲ್ಲಿ ತನ್ನ ಸೋಜಿಗದ ದೃಷ್ಟಿಯನ್ನು ನೆಡುವಳೋ, ಎಲ್ಲಿ ತನ್ನ ಮುಗುಳ್ನಗೆಯ ಚೆಲುವನ್ನು ಹರಿಯಿಸುವಳೋ ಅಲ್ಲೆಲ್ಲ ಆತ್ಮವು ಅವಳ ಕೈಗೆ ಸಿಕ್ಕು ಪಾವನಕ್ಕೆ ಪಾವನವಾಗುತ್ತದೆ. ಆಕೆ ಶಕ್ತಿದಾತೆ, ಆಕೆಯೇ ಶಕ್ತಿ, ಆಕೆಯೇ ಧಾತ್ರಿ, ಆಕೆಯಲ್ಲಿ ಆನಂದದ ಸಾಗರವೇ ನೆಲೆಗೊಂಡಿದೆ. ಅದೊಂದು ಬರೀ ಸಾಗರವಲ್ಲ ಅದು ಕ್ಷೀರಸಾಗರ. ಆಕೆ ತನ್ನ ಅಮೃತಹಸ್ತದಿಂದ ನಮ್ಮನ್ನು ಸ್ಪರ್ಶಿಸಿದರೆ ಸಾಕು, ನಾವು ಅಮೃತಪುತ್ರರಾಗುತ್ತೇವೆ. ಅದರ ರಹಸ್ಯ ಅತ್ಯಂತ ಗೂಢ, ಕೋಮಲ, ಅದರ ಪ್ರಭಾವವು ದೇಶ, ಮನಃ, ಪ್ರಾಣಗಳನ್ನು ಪರಿಶುದ್ಧಗೊಳಿಸುತ್ತದೆ. ಆಕೆಯ ದರ್ಶನ ಮಾತ್ರದಿಂದ ಆನಂದ ವಾಹಿನಿಯಲ್ಲಿ ಆತ್ಮ ತೇಂಕಾಡುತ್ತದೆ.

ದೈವೀ ಪ್ರೇಮ, ದೈವೀ ಶಕ್ತಿ, ದೈವೀ ಆನಂದವನ್ನು ಎಲ್ಲ ಮಹಾತ್ಮರು, ತಪಸ್ವಿಗಳು ಆಕೆಯಲ್ಲಿ ಕಂಡಿದ್ದಾರೆ. ಆನಂದ ತುಂದಿಲರಾಗಿದ್ದಾರೆ. ಅಂಥ ದಿವ್ಯಾನುಭವ ಪಡೆಯಲು ನಮ್ಮ ನಮ್ಮ ಆತ್ಮಗಳನ್ನು ನಾವು ಅರಳಿಸಿ ಕೊಳ್ಳಬೇಕು, ಮನಸ್ಸನ್ನು ಹಿಗ್ಗಿಸಿಕೊಳ್ಳಬೇಕು. ಆಗ ತಾಯಿ ಮಮತೆಯ ಲೋಕೋತ್ತರ ಸುಗಂಧ ನಮ್ಮದಾಗುತ್ತದೆ. ನಾನು ಪುಣ್ಯಶಾಲಿ ನಾನೂ ಅಂಥ ಸುಖ ಪಡೆದಿದ್ದೇನೆ. ಅದು ಭಗವತಿ ತಾಯಿಯ ಕೃಪೆ. 'ನಾನು' ಇಲ್ಲವಾಗಿರುವುದರ ಸುಖ ಆ ತಾಯಿ ಕೃಪೆಯಿಂದಲೇ ಹೊಂದಿದ್ದೇನೆ. ನಾನು ಸದಾ ಆಕೆಯ ಸಾನ್ನಿಧ್ಯದಲ್ಲಿಯೇ ಇರುತ್ತೇನೆ. ಮಗುವಾಗಿ ಹೀಗಿರಲು ನಿಮಗೂ ಸಾಧ್ಯವಿದೆ. ಆದರೆ ಒಂದು ಕರಾರು, ನೀವು ಮಗುವಾಗಬೇಕು. ಎಲ್ಲ ಅಹಂಕಾರ, ಹಮ್ಮು ಬಿಮ್ಮುಗಳಿಂದ ಮುಕ್ತರಾಗಬೇಕು. ತಾಯೇ, ನೀನೇ ಗತಿ–ಮತಿಯೆಂದು ಆಕೆಯಲ್ಲಿ ಮೊರೆ ಹೋಗಬೇಕು. ಆಗ ತಾಯಿ ಕೃಪೆಗೆ ಪಾತ್ರರಾಗಬಲ್ಲಿರಿ. ಆಗ ಆ ಕೇವಲ ಆನಂದ ನಿಮಗೂ ಪ್ರಾಪ್ತವಾಗುತ್ತದೆ. ನನ್ನ ಕಣ್ಣಲ್ಲಿ ನಾನು ನೋಡುವ ಪ್ರತಿಯೊಂದು ವಸ್ತು ಜಡ ಚೇತನ ಎಲ್ಲದರಲ್ಲಿ ತಾಯಿಯೇ ನೆಲೆಸಿರುವುದನ್ನು ಕಾಣುತ್ತೇನೆ. ಈಗ ನಿಮ್ಮೊಂದಿಗೆ ಮಾತಾಡುತ್ತಿರುವ ಪ್ರತಿಯೊಂದು ಶಬ್ಧಗಳಲ್ಲಿ ತಾಯಿಯೇ ನೆಲೆಸಿದ್ದಾಳೆ. 'ಸರ್ವಂ ಖಿಲ್ವಿದಂ ಬ್ರಹ್ಮ' ಎಂಬಂತೆ ನನ್ನ ಪಾಲಿಗೆ 'ಸರ್ವಂ ಖಿಲ್ವಿದಂ ಮಾತಾ' ಆಗಿದೆ. ಇದು ಸಾಧ್ಯವಾಗಬೇಕಾದರೆ ವಿಷಯ ಪ್ರಕೃತಿಯನ್ನು ನಾವು ಶುದ್ಧವೂ, ವಿಶುದ್ಧವೂ, ಸಿದ್ಧವೂ ಆಗುವಂತೆ ಸಾಧನೆಯಲ್ಲಿ ನಮ್ಮನ್ನು ತೊಡಗಿಸಿಕೊಳ್ಳಬೇಕು. ಅಂಥ ತಾಯಿಯೇ ಜಗನ್ಮಾತೆಯಾಗಿದ್ದಾಳೆ. ಆಕೆ ಬಹು ರೂಪಿಣಿಯಾಗಿದ್ದಾಳೆ.

ಓ ! ತಾಯೇ
ನನ್ನ ಅಳವಿನ ಮಾತಲ್ಲ
ಹೇಳಬೇಕೆಂದರೆ
ನೀನು ನನ್ನವಳು
ಕೇವಲ ನನ್ನವಳು – ಎಂದು !
ಏಕೆಂದರೆ –
ನಿನ್ನ ರೂಪ ಒಂದಲ್ಲ ಎರಡಲ್ಲ
ನೀನು ಅನಂತರೂಪಿಣಿ
ವಿಶ್ವತೋಪಾದಃ
ವಿಶ್ವತೋ ಚಕ್ಷುಃ
ವಿಶ್ವತೋ ಬಾಹುಃ
ಓ ! ಶಿವೇ, ಶಂಕರೀ, ಭಾರ್ಗವೀ
ಭುವನೇಶ್ವರಿ, ಭಗವತಿ
ನಾನು ನಿನ್ನ ಈ ಅನಂತರೂಪಗಳ ಎದುರಿನಲ್ಲಿ
ನನ್ನನ್ನು ಸಂಪೂರ್ಣ ಮರೆತಿದ್ದೇನೆ ತಾಯಿ !
ನಾನು ಈಗ ನಾನಾಗಿಲ್ಲ
ಈಗ ಕೇವಲ ನೀನಿರುವೆ
ಕೇವಲ ನೀನು ನೀನು ತಾಯೇ
ಹಾಂ !... ಕೇವಲ ನೀನು ಮಾತ್ರ ! *

* ಜಯನಗರ, ಧಾರವಾಡ.







## ಬಸವಣ್ಣನವರು ಮತ್ತು ರಾಜತ್ವ

– ಡಾ॥ ಜಿ.ಎಸ್. ಶಿವರುದ್ರಪ್ಪ *

ಬಸವಣ್ಣನವರನ್ನು ಹನ್ನೆರಡನೆಯ ಶತಮಾನದ ಸಾಮಾಜಿಕ–ಧಾರ್ಮಿಕ ಆಂದೋಳನವೊಂದರ ಮುಂಚೂಣಿಯಲ್ಲಿದ್ದವರೆಂದು ಪರಿಗಣಿಸಲಾಗಿದೆ. ಸಾಮಾಜಿಕವಾಗಿ ಬಸವಣ್ಣನವರು, ಅಂದಿನ ಸಮಾಜದ ಪ್ರತಿಷ್ಠಿತ ಸ್ತರದಿಂದ ಬಂದವರು ಮತ್ತು ಸಾಮಾಜಿಕವಾಗಿಯೂ ಅಂದಿನ ಆಳುವ ವರ್ಗದ ಪ್ರತಿಷ್ಠಿತ ಸ್ಥಾನದಲ್ಲಿದ್ದವರು. ಅಂದರೆ ಬ್ರಾಹ್ಮಣ ಮತ್ತು ರಾಜಶಾಹಿ ಈ ಎರಡೂ ಲಕ್ಷಣಗಳನ್ನು ಮೈಗೂಡಿಸಿಕೊಂಡ ವ್ಯಕ್ತಿಯೊಬ್ಬ, ಅಂದಿನ ಸಾಮಾಜಿಕ– ಧಾರ್ಮಿಕ ಆಂದೋಳನದ ಮುಂದಾಳುವಾಗಿ ತನ್ನನ್ನು ತೊಡಗಿಸಿಕೊಂಡದ್ದು ನಿಜವಾಗಿಯೂ ಕಾಲಧರ್ಮದ ಆಶ್ಚರ್ಯಗಳಲ್ಲಿ ಒಂದು. ಯಾಕೆಂದರೆ ಬಸವಣ್ಣನವರು ತಮ್ಮನ್ನು ತೊಡಗಿಸಿಕೊಂಡ ಚಳುವಳಿ, ಅಂದಿನ ಸಮಾಜದ ಕೆಳಗಿನ ಸ್ತರದ ಬಹುಸಂಖ್ಯೆಯ ಜನಸಾಮಾನ್ಯರನ್ನು ಒಳಕೊಂಡದ್ದು. ಸಾಮಾನ್ಯವಾಗಿ ಪುರೋಹಿತಶಾಹಿ ಹಾಗೂ ರಾಜಶಾಹಿ, ಇವು ಸದಾ ಚಾರಿತ್ರಿಕವಾಗಿ ಜನಸಾಮಾನ್ಯರ ಸ್ತರದಿಂದ ಮೇಲಿನ ನೆಲೆಗೆ ಸೇರಿದವುಗಳಾಗಿದ್ದು, ಈ ಅಳಿಸಿಕೊಳ್ಳುವ ವರ್ಗದವರನ್ನು ಹೆದರಿಸಿ, ಸುಲಿಗೆ ಮಾಡಿ, ಹತೋಟಿಯಲ್ಲಿಟ್ಟುಕೊಂಡವುಗಳು. ಆದರೆ ಪುರೋಹಿತಶಾಹಿ ಮತ್ತು ರಾಜಶಾಹಿಯ ಒಂದು ಭಾಗವಾಗಿದ್ದ ಬಸವಣ್ಣನವರು, ಕೆಳಗಿನ ಸ್ತರದ ಜನಸಾಮಾನ್ಯರೊಂದಿಗೆ ತಮ್ಮನ್ನು ಸಮೀಕರಿಸಿಕೊಂಡು, ಹೊಸತೊಂದು ಸಾಮಾಜಿಕ–ಧಾರ್ಮಿಕ ಆಂದೋಲನದ ಪ್ರವರ್ತಕರಾದದ್ದು ಅತ್ಯಂತ ಅಪೂರ್ವವಾದ ಸಂಗತಿಯಾಗಿದೆ.

ಹೀಗೆ ಮಾಡಬೇಕಾದರೆ ವ್ಯಕ್ತಿ ಒಂದನ್ನು ನಿರಾಕರಿಸದೆ ಮತ್ತೊಂದರೊಂದಿಗೆ ಬೆರೆಯಲು ಬರುವುದಿಲ್ಲ. ಬಸವಣ್ಣನವರು ಮಾಡಿದ ಮೊದಲ ಕೆಲಸವೆಂದರೆ ಅವರು ತಮ್ಮನ್ನು ಬ್ರಾಹ್ಮಣ್ಯದಿಂದ ಪಾರುಮಾಡಿಕೊಂಡದ್ದು. ಇದಂತೂ ಅವರು ತಮ್ಮ ಎಂಟನೆಯ ವರ್ಷದಲ್ಲಿ ಉಪನಯನದ ಸಂದರ್ಭದಲ್ಲಿ, ಜನಿವಾರವನ್ನು ಹಾಕಿಕೊಂಡು ತಾವು ಬ್ರಾಹ್ಮಣರಾಗಲು ನಿರಾಕರಿಸಿದರೆಂಬ ಸಂಗತಿಯಿಂದ ಸ್ಪಷ್ಟವಾಗುತ್ತದೆ. ಅಂದರೆ ಯಾವ ಒಂದು ಸಂಸ್ಕಾರದ ಮೂಲಕ, ತಾವು ಉಳಿದೆಲ್ಲರಿಗಿಂತ ಶ್ರೇಷ್ಠರೆಂದು ಭಾವಿಸಿ ಕೊಂಡು ಬದುಕಬಹುದೋ ಅಂಥ ಒಂದು ನಿಲುವನ್ನು ತಿರಸ್ಕರಿಸುವ ಕ್ರಾಂತಿಕಾರಕ ಕ್ರಿಯೆಯ ಮೂಲಕ, ಮುಂದೆ ತಾನು ಸಾಮಾನ್ಯ ಜನತೆಯೊಂದಿಗೆ ಬೆರೆತು ಆಂದೋಳನವೊಂದರ ನೇತಾರನಾಗಬಹುದೆಂಬ ಯಾವುದೇ ಪೂರ್ವ ಕಲ್ಪನೆಯೂ ಇಲ್ಲದ ಕಾಲದಲ್ಲಿ, ಬ್ರಾಹ್ಮಣ್ಯವನ್ನು ತಿರಸ್ಕರಿಸಿದರು. ಮುಂದೆ ಅವರು ವೀರಶೈವ ಧರ್ಮವನ್ನು ಒಪ್ಪಿಕೊಂಡು, **'ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರೆಲ್ಲರನ್ನು ಒಂದೇ ಎಂಬೆ'** ಎಂಬ ಒಂದು ಮನಸ್ಥಿತಿಯನ್ನು ಸಾಧಿಸಿಕೊಳ್ಳಲು ಪ್ರಯತ್ನಿಸಿದರು. ಸಮಾಜದ ವಿವಿಧ ಸ್ತರಗಳ ಜನಗಳನ್ನು ಒಳಗೊಂಡ ಆಂದೋಲನದ ಕೇಂದ್ರದಲ್ಲಿ ನಿಂತು, ಹೆಜ್ಜೆ ಹೆಜ್ಜೆಗೂ ತಾನು ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ನೆನಪನ್ನು ಅಳಿಸಿಹಾಕುವ ನಿರಂತರವಾದ ಹೋರಾಟದಲ್ಲಿ ತೊಡಗಿದರು. ಸಮಾಜದ ಕನಿಷ್ಠ ಘಟಕವಾದ ಹೊಲೆಯರ ಹೊಟ್ಟೆಯಲ್ಲಿ, ತಾವು ಹಾದರಕ್ಕೆ ಹುಟ್ಟಿದವರೆಂದುಕೊಳ್ಳುವ ನೈಚ್ಯಾನುಸಂಧಾನದ ನಿಲುವುಗಳನ್ನು ತಾಳುತ್ತ ತಮ್ಮನ್ನು ಬೆಂಬಿಡದ ಭೂತದಂತೆ ಕಾಡುವ ಬ್ರಾಹ್ಮಣ್ಯದ ಬೇರನ್ನು ಮನಸ್ಸಿನಿಂದ ಕೀಳಲು ಪ್ರಯತ್ನಿಸಿದರು. ಹೀಗೆ ಹುಟ್ಟಿನೊಡನೆ ಬಂದ ಬ್ರಾಹ್ಮಣ್ಯದ ಸಂಸ್ಕಾರವನ್ನು ಮೂಲೋತ್ಪಾಟನೆ ಮಾಡಿಕೊಳ್ಳುತ್ತಾ, ಸಮಾಜದ ಸಾಮಾನ್ಯ ವರ್ಗದವರೊಂದಿಗೆ ಬಸವಣ್ಣನವರು ತಮ್ಮನ್ನು ಸಮೀಕರಿಸಿಕೊಂಡು ಬದುಕಿದ್ದು ಅತ್ಯಂತ ಮಹತ್ವದ ಸಂಗತಿಯಾಗಿದೆ.

ಆದರೆ, ಅವರು ತಮ್ಮ ಬ್ರಾಹ್ಮಣ್ಯವನ್ನು ನಿರಾಕರಿಸಿದರೂ, ಅವರು ಅಂದಿನ ರಾಜಶಾಹಿಯೊಂದಿಗೆ ಹೊಂದಿಕೊಂಡು ಬದುಕಬೇಕಾಗಿ ಬಂದದ್ದರಿಂದ, ಬೇರೆ ಬಗೆಯ ಬಿಕ್ಕಟ್ಟುಗಳನ್ನು ಎದುರಿಸಬೇಕಾಯಿತೆಂದು ತೋರುತ್ತದೆ. ಮೊದಲು ಸಾಮಂತನಾಗಿದ್ದು, ಆನಂತರ ಚಕ್ರವರ್ತಿಯಾದ ಬಿಜ್ಜಳನಲ್ಲಿ ಅವರು ದಂಡಾಧಿಕಾರಿಯಾಗಿ ಉದ್ಯೋಗದಲ್ಲಿದ್ದವರು. ಪುರೋಹಿತಶಾಹಿಯನ್ನು ಧಿಕ್ಕರಿಸಿ ಬಸವಣ್ಣನವರು, ವೀರಶೈವವೆಂಬ ಧರ್ಮವನ್ನೇನೋ ಒಪ್ಪಿ

* 'ಚೈತ್ರ', ನಂ. ೮೬೭, ೧೮ನೇ ಮುಖ್ಯರಸ್ತೆ, ೨ನೇ ಹಂತ, ಬೆಂಗಳೂರು – ೫೬೦ ೦೭೦.



ಕೊಂಡರು; ಆದರೆ ಬ್ರಾಹ್ಮಣ್ಯವನ್ನು ನಿರಾಕರಿಸಿದ ರೀತಿಯಲ್ಲೇ ರಾಜಶಾಹಿಯನ್ನೂ ಧಿಕ್ಕರಿಸಿ, ಬೇರೊಂದು ಸ್ವತಂತ್ರ ಉದ್ಯೋಗದಲ್ಲಿ ನಿಂತು, ಅವರು ಅಂದಿನ ಜನತೆಯ ಆಂದೋಲನದಲ್ಲಿ ಪಾಲುಗೊಳ್ಳಬಹುದಾಗಿತ್ತು ಎಂದು ಈ ದಿನ ನಾವು ನಿರೀಕ್ಷಿಸುವುದಾಗಲಿ, ಭಾವಿಸುವುದಾಗಲಿ ಸರಿಯಾಗುವುದಿಲ್ಲ. ಯಾಕೆಂದರೆ ರಾಜತ್ವದ ಬಗೆಗೆ ಬಸವಣ್ಣನವರ ನಿಲುವುಗಳೇನೇ ಇರಲಿ, ಅವರ ಆಂದೋಲನ ಯಶಸ್ವಿಯಾದದ್ದಕ್ಕೆ ಅವರು ಅಂದಿನ ರಾಜತ್ವದ ಒಂದು ಅಂಗವಾಗಿ ಪಡೆದುಕೊಂಡಿದ್ದ ಅಧಿಕಾರದ ಸ್ಥಾನಮಾನಗಳೂ ಬಹುಮುಖ್ಯವಾದ ಕಾರಣಗಳಾಗಿವೆ ಎಂಬುದನ್ನು ತಳ್ಳಿಹಾಕಲು ಬರುವುದಿಲ್ಲ. ಯಾಕೆಂದರೆ ಅಂದಿನ ಆಂದೋಲನಕ್ಕೆ ಅದರ ಸಂಘಟನೆಗೆ ಮತ್ತು ಅದರ ನಿರ್ವಹಣೆಗೆ ಸಾಕಷ್ಟು ಜನಬಲ ಮತ್ತು ಧನಬಲ ಅಗತ್ಯವಾಗಿದ್ದು, ಬಸವಣ್ಣನವರ ಈ 'ಅಧಿಕಾರದಿಂದಲೂ ಆ ಬಗೆಯ ನೆರವು ಸಿಕ್ಕಿರಬೇಕು. ಹೀಗಲ್ಲದೆ, ಇದಾವುದೂ ಇಲ್ಲದ ಸರ್ವಸಂಗಪರಿತ್ಯಾಗಿಯೊಬ್ಬ ಇಂಥ ಸಂಘಟನೆಗಳನ್ನು ಮಾಡುವುದು ಸಾಧ್ಯವಿಲ್ಲ; ಮಿಗಿಲಾಗಿ ಸರ್ವಸಂಗ ಪರಿತ್ಯಾಗಿಗಳಿಗೆ ಇದಾವುದೂ ಬೇಕಾಗುವುದಿಲ್ಲ. ಅದೃಷ್ಟವಶಾತ್ ಬಸವಣ್ಣನವರು ಇಂಥ ಸರ್ವಸಂಗಪರಿತ್ಯಾಗಿ ಅಲ್ಲ.

ಹೀಗೆ ರಾಜತ್ವದೊಂದಿಗೆ ಸಂಬಂಧವಿರಿಸಿಕೊಂಡವನೊಬ್ಬನನ್ನು, ರಾಜತ್ವದಿಂದ ಶೋಷಣೆಗೆ ಒಳಗಾಗುತ್ತ ಬಂದ ಜನಸಮೂಹ ತನ್ನ ನಾಯಕನೆಂದು ಒಪ್ಪಿಕೊಂಡದ್ದು ಹೇಗೆ? ಅದರಲ್ಲೂ ಸದಾ ಸಮಾನತೆಯ ಮಾತನಾಡುತ್ತಾ, ಈ ಲೋಕದ ಭೋಗ ವೈಭವಗಳ ಬಗ್ಗೆ ವಿರಕ್ತಿಯ ಮಾತ ಮಾಡುತ್ತಾ ಇದ್ದ ವ್ಯಕ್ತಿಯೊಬ್ಬ, ತಮ್ಮ ಎದುರಿಗೇ ರಾಜ್ಯದ ದೊಡ್ಡ ಅಧಿಕಾರವನ್ನು ನಿರ್ವಹಿಸುತ್ತ, ರಾಜನೊಂದಿಗೆ ಅರಮನೆಯೊಳಗೆ ವ್ಯವಹರಿಸುತ್ತಿರುವುದರ ವೈಪರೀತ್ಯವನ್ನು, ಅವರನ್ನು ನಾಯಕನೆಂದು ಒಪ್ಪಿಕೊಂಡ ಜನ ಹೇಗೆ ತಾಳಿಕೊಂಡರು? ಹೀಗೆ ಜನ ಅವರನ್ನು ಒಪ್ಪಿ ಕೊಂಡದ್ದಕ್ಕೆ ಕಾರಣ ಬಸವಣ್ಣನವರ ಮುಚ್ಚುಮರೆಯಿಲ್ಲದ ವ್ಯಕ್ತಿತ್ವದ ನಿಲುವುಗಳೇ ಎಂದು ಹೇಳಬಹುದು. ಅವರು 'ರಾಜ'ನೊಂದಿಗೆ ತಮಗೆ ಇರುವ ಸಂಬಂಧಗಳನ್ನು, ತಮ್ಮ ನಿಲುವುಗಳನ್ನೂ ಅತ್ಯಂತ ಸ್ಪಷ್ಟವಾಗಿ ಬಿಚ್ಚಿಡುತ್ತಾ, ತಮ್ಮ ಸುತ್ತಣ ಜನ ಆಗಾಗ ಸಂಶಯಪಟ್ಟರೂ ಒಟ್ಟಾರೆಯಾಗಿ ತಮ್ಮನ್ನು, 'ಇವನಾರವ, ಇವನಾರವ' ಎಂದು ಕೊಳ್ಳದೆ 'ಇವನಮ್ಮವ, ಇವನಮ್ಮವ'ನೆಂದು ಒಪ್ಪಿಕೊಳ್ಳುವಂತೆ ನಡೆದುಕೊಂಡರು.

ಬಸವ-ಬಿಜ್ಜಳರ ಸಂಬಂಧವನ್ನು ಕುರಿತು, ಮುಂದಿನ ಕಾವ್ಯಗಳು ಅವರಿಬ್ಬರನ್ನು ಬಹುಮಟ್ಟಿಗೆ ನಾಯಕ-ಪ್ರತಿನಾಯಕರೆಂಬಂತೆ ಚಿತ್ರಿಸಿದರೂ, ಎಷ್ಟೋ ವೇಳೆ ಬಿಜ್ಜಳನಿಗಿಂತ ಬಸವಣ್ಣನೇ 'ರಾಜ'ನೆಂಬತೆ ಕಾಣಿಸಿದರೂ, ಮೂಲತಃ ಅವರಿಬ್ಬರ ಸಂಬಂಧ ಒಂದು ಬಗೆಯ ವೈಯಕ್ತಿಕವಾಗಿ ಒಡಂಬಡಿಕೆಯಾಗೇ ಇತ್ತೆಂದು ತೋರುತ್ತದೆ. ಅವರಿಬ್ಬರ ಸಂಬಂಧಗಳನ್ನು ಕೆಡಿಸಲು 'ಕೊಂಡೆಯರು' ಮತ್ತು ಇತರ ಉಚ್ಚವರ್ಗದವರು ಹೊಂಚುತ್ತಿದ್ದರೆಂಬುದು ಸಹಜವಾದ ಸಂಗತಿಯೇ. ಬಸವಣ್ಣನವರ ಸಾಮಾಜಿಕ ಧಾರ್ಮಿಕ ನಿಲುವುಗಳಿಗೂ, ಬಿಜ್ಜಳನ ರಾಜಕೀಯ-ಧಾರ್ಮಿಕ ನಿಲುವುಗಳಿಗೂ ಘರ್ಷಣೆ ಬಂದದ್ದು ವಿರಳವೆಂದೇ ಹೇಳಬೇಕು. ಜತೆಗೆ ಅಧಿಕಾರದಲ್ಲಿದ್ದೂ, ಅದರ ಬಗ್ಗೆ ಸಾಕಷ್ಟು ಎಚ್ಚರವಾಗಿ ಹಾಗೂ ಅತ್ಯಂತ ಪ್ರಾಮಾಣಿಕವಾಗಿದ್ದ ಬಸವಣ್ಣನವರಂಥವರ ಬಗೆಗೆ, ಪ್ರಭುವಾದವನು ದುಡುಕಿ ನಡೆದುಕೊಳ್ಳುವುದಾಗಲೀ ಅಥವಾ ಆತನ ಸಾಮಾಜಿಕ-ಧಾರ್ಮಿಕ ನಿಲುವುಗಳನ್ನು ಪ್ರಶ್ನಿಸುವುದಾಗಲೀ, ಬಹುಶಃ ಸಾಧ್ಯವಾಗಲಿಕ್ಕಿಲ್ಲವೆಂದು ಊಹಿಸಬಹುದು. ಈ ಬಗ್ಗೆ ಕಾವ್ಯಗಳು ಹೇಳಿದ ಸಂಗತಿಗಳನ್ನು ಬದಿಗೆ ಇರಿಸಿ, ಬಸವಣ್ಣನವರ ವಚನಗಳನ್ನು ನಾವು ಅವಲಂಬಿಸುವುದು ಒಳ್ಳೆಯದು.

ಬಸವಣ್ಣನವರು ಮೂಲತಃ ಅನುಭಾವಿಕ ನಿಲುವಿನ ವ್ಯಕ್ತಿಯಾದ್ದರಿಂದ, ಅವರ ಪಾಲಿಗೆ ಈ ಅಧಿಕಾರ ಇತ್ಯಾದಿಗಳ ಬಗ್ಗೆ ಅಂತಹ ಭ್ರಮೆಗಳೇನೂ ಇರಲಿಲ್ಲ. ಲೋಕದ ಭೋಗ-ವೈಭವಗಳ ಬಗೆಗೆ ವಿರಕ್ತನಾಗುವಂತಹ ಚೇತನಕ್ಕೆ ಇವು ಯಾವುವು ದೊಡ್ಡವೆಂದು ತೋರುವುದಿಲ್ಲ. ಅವರಿಗೆ ಈ ಲೋಕದ ಭೋಗ ವೈಭವಗಳಿಗಿಂತ ಸತ್ಯದ ನಿಲವನ್ನರಿಯುವುದು ಮುಖ್ಯವಾಗಿತ್ತು. ಒಂದೆಡೆ-

***ಆನೆಯನೇರಿಕೊಂಡು ಹೋದಿರೆ ನೀವು***
***ಕುದುರೆಯನೇರಿಕೊಂಡು ಹೋದಿರೆ ನೀವು***
***ಕುಂಕುಮ ಕಸ್ತೂರಿಯ ಪೂಸಿಕೊಂಡು ಹೋದಿರೆ ಅಣ್ಣಾ***
***ಸತ್ಯದ ನಿಲವನರಿಯದೆ ಹೋದಿರಲ್ಲಾ....***

(ವ.೬೩೭, ಪು.೨೫೬)

ಎಂಬ ಮಾತಿನಲ್ಲಿ, ಈ ಲೋಕದ ಭೋಗ-ಭಾಗ್ಯಗಳ






ಬೆನ್ನುಹತ್ತಿ, ಸತ್ಯದ ನಿಲವನ್ನರಿಯದೆ ವ್ಯರ್ಥವಾಗಿ ಹೋದ ಪದವಿಗಳ ಹಾಗೂ ಅಧಿಕಾರಗಳ ಬಗ್ಗೆ ತಾಳಿದ ಕನಿಕರ ಅಭಿವ್ಯಕ್ತವಾಗಿದೆ. ಜತೆಗೆ ರಾಜರ ದರ್ಪ, ಮುನಿಸು ಇತ್ಯಾದಿಗಳ ನಡುವೆ ಕೆಲಸ ಮಾಡುವುದು ಎಂತಹ ಕಷ್ಟದ ಪರಿಸ್ಥಿತಿ ಎಂಬುದನ್ನೂ ಅವರು ಬಲ್ಲವರಾಗಿದ್ದರು. **'ಅರಸು ಮುನಿದೆಡೆ ನಾಡೊಳಗಿರಬಾರದಯ್ಯಾ'** (ವ. ೮೨೪, ಪು. ೩೩೫) ಎಂಬ ಮಾತಿನಲ್ಲಿ, ರಾಜನ ಆಗ್ರಹಕ್ಕೊಳಗಾದರೆ ಅಂಥಹವನಿಗೆ ಉಳಿಗಾಲವೇ ಇಲ್ಲ ಎಂಬ ಕಟು ಸತ್ಯವನ್ನರಿತವರಾಗಿದ್ದರು. ಇಂಥ ಪರಿಸ್ಥಿತಿಯಲ್ಲಿ ಅವರಿಗೆ ಬಹುಶಃ **'ರಾಜ' 'ರಾಜತ್ವ'** ಇತ್ಯಾದಿಗಳ ಬಗ್ಗೆ ತಿರಸ್ಕಾರವೇ ಇದ್ದಂತೆ ತೋರುತ್ತದೆ. 'ರಾಜ' ಕೂಡ ಎಲ್ಲರ ಹಾಗೆ ಮನುಷ್ಯ; ಅವನಿಗೆ ಬೆಲೆ ಬರುವುದು ಅವನ 'ರಾಜತ್ವ' ಅಥವಾ 'ರಾಜಪದವಿ'ಯಿಂದ. ಅವನೂ ಮೃತ್ಯುವಿಗೆ ಒಳಗಾಗುವ ಒಬ್ಬ ಮನುಷ್ಯ ; ಇಂಥವನು ಸತ್ತರೆ, ಉಳಿದವರ ಶವಗಳಿಗೂ, ಇವನ ಶವಕ್ಕೂ ಏನು ವ್ಯತ್ಯಾಸ? ರಾಜನ 'ಶವ' ಎಂದರೆ ಅದಕ್ಕೆ ಅಂಥ ವಿಶೇಷವೇನೂ ಇಲ್ಲ.

***ವ್ಯಾಧನೊಂದು ಮೊಲನ ತಂದರೆ ಸಲುವ ಹಾಗೆಕ್ಕೆ ಬಿಲಿವರಯ್ಯಾ***
***ನೆಲನಾಳ್ವನ ಹೆಣನೆಂದಡೆ ಒಂದಡಕೆಗೆ ಕೊಂಬವರಿಲ್ಲ ನೋಡಯ್ಯಾ!***

(ವ. ೧೫೮, ಪು. ೭೧)

ರಾಜನಾದವನ ಶವಕ್ಕೆ ಒಂದು ಸತ್ತ ಮೊಲಕ್ಕಿರುವ ಬೆಲೆಯೂ ಇಲ್ಲ; ಅಂಥ ನಿಕೃಷ್ಟವಾದ ಪದಾರ್ಥ ಅದು. ಎಲ್ಲ ಅನುಭಾವಿಗಳಂತೆ 'ಮೃತ್ಯುತತ್ತ್ವ'ವನ್ನು ಕೇಂದ್ರೀಕರಿಸಿಕೊಂಡು, ಲೋಕದ ಪದವಿ-ಐಶ್ವರ್ಯ ಇತ್ಯಾದಿಗಳನ್ನು ಒರೆಗೆ ಹಚ್ಚುವ ಬಸವಣ್ಣನವರಿಗೆ, ಅವರು ವಹಿಸಿಕೊಂಡ ಪದವಿ ಕೂಡಾ ನಿಕೃಷ್ಟವಾದದ್ದೇ. ಅವರು ಬಹಿರಂಗದಲ್ಲಿ ಯಾವನೋ ಒಬ್ಬ ಒಡೆಯನ ಸೇವೆಗೆ ನಿಂತಂತೆ ಕಾಣಿಸಿದರೂ, ಅಂತರಂಗದಲಿ ಅವರ ಒಡೆಯರು ಬೇರೆಯೇ 'ಎನಗೆ ಒಡೆಯರುಂಟು ಕೂಡಲಸಂಗನ ಶರಣರು' (ವ,೩೨೩, ಪು.೧೨೯)
ಎಂದು ಹೇಳುವುದರ ಮೂಲಕ, ಮಾನಸಿಕವಾಗಿ ತಮ್ಮ ನಿಷ್ಠೆ ಯಾರಿಗೆ ಎಂಬುದನ್ನು ಸ್ಪಷ್ಟವಾಗಿ ಹೇಳುತ್ತಾರೆ. ಅಷ್ಟೇ ಅಲ್ಲ-

***ಅರಸನ ಮನೆಯಲ್ಲಿ ಅರಸಿಯಾಗಿಪ್ಪುದರಿಂದ***
***ಭಕ್ತರ ಮನೆಯಲ್ಲಿ ತೊತ್ತಾಗಿಪ್ಪುದು ಕರಲೇಸಯ್ಯಾ***

(ವ. ೩೫೫, ಪು. ೧೪೦)

ಎಂಬುದನ್ನು ಅವರು ಚೆನ್ನಾಗಿ ಬಲ್ಲರು, ಈ ನಿಲುವಿನ ಬಸವಣ್ಣನವರು, ರಾಜತ್ವ, ಅಧಿಕಾರ, ಐಶ್ವರ್ಯ, ಇತ್ಯಾದಿಗಳನ್ನು ಕುರಿತ ತಮ್ಮ ಅಭಿಪ್ರಾಯಗಳನ್ನು ಸ್ಪಷ್ಟಪಡಿಸುತ್ತಾ, ಸುತ್ತಣ ಸಾಮಾನ್ಯ ಜನತೆಯೊಂದಿಗೆ ತಮ್ಮನ್ನು ಸಮೀಕರಿಸಿಕೊಂಡು, ಅವರ ವಿಶ್ವಾಸ ಗೌರವಗಳನ್ನು ಗಳಿಸಿಕೊಳ್ಳಲು ಸಾಧ್ಯವಾಯಿತೆಂದು ತೋರುತ್ತದೆ.

ಆದರೂ, ಅವರು ಬಿಜ್ಜಳನ ಸೇವೆಯಲ್ಲಿ ನಿಂತದ್ದನ್ನು ಕಂಡು, ಅವರ ನಿಲುವುಗಳನ್ನು ಕುರಿತು ಸಂದೇಹಿಸಿದ, ಪ್ರಶ್ನಿಸಿದ ಜನ, ಅವರ ಆಂದೋಳನದಾಚೆ ನಿಂತವರು ಮಾತ್ರವಲ್ಲ, ಅವರ ಆಪ್ತರೇ ಈ ಬಗ್ಗೆ ಪ್ರಶ್ನಿಸಿರಬಹುದು. 'ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹನೆಂದು ನುಡಿವರಯ್ಯಾ ಪ್ರಥಮರು' (ವ. ೭೦೯, ಪು. ೨೮೩) ಎಂಬ ಮಾತಿನಲ್ಲಿ ಹೀಗೆ ಅವರನ್ನು ಕುರಿತು ಆಡಿಕೊಂಡವರಲ್ಲಿ ಅವರ ಆಪ್ತವರ್ಗಕ್ಕೆ ಸೇರಿದವರೇ ಇದ್ದರೆಂಬುದು ಸ್ಪಷ್ಟವಾಗಿದೆ. ಬಸವಣ್ಣನವರು ಯಾವ ಇಂಥ ಪ್ರಶ್ನೆ-ಆಕ್ಷೇಪಣೆಗಳನ್ನು ತಳ್ಳಿಹಾಕದೆ ಉತ್ತರ ಕೊಟ್ಟಿರುವುದು ಅವರ ದೊಡ್ಡತನಕ್ಕೆ ಹಾಗೂ ಪ್ರಾಮಾಣಿಕತೆಗೆ ಸಾಕ್ಷಿಯಾಗಿದೆ. ಬಸವಣ್ಣನವರಿಗೆ ಗೊತ್ತು ತಾವು ಸೇವೆ ಮಾಡುತ್ತಿದ್ದೇವೆ ಎಂದು, ಆದರೆ, ಅವರು ಈ ಹಂತದಲ್ಲಿ-

*ನಾನು ಬೆವಹಾರದ ಮಾಡುವೆನಯ್ಯಾ*
*ಲಿಂಗಾರ್ಚನೆಗೆಂದು*
*ನಾನು ಪರಸೇವೆಯ ಮಾಡುವೆನಯ್ಯಾ*
*ಜಂಗಮದಾಸೋಹಕ್ಕೆಂದು*

(ವ. ೭೦೮, ಪು. ೨೮೩)

ಎಂದು ಉತ್ತರ ಕೊಡುತ್ತಾರೆ. ಲೌಕಿಕವಾಗಿ, ಒಬ್ಬ ಮನುಷ್ಯನಾಗಿ ಬದುಕುವುದಕ್ಕೆ ಯಾವುದಾದರೂ ಒಂದು ಉದ್ಯೋಗವನ್ನು ಅವಲಂಬಿಸುವುದು ತಪ್ಪೇನಲ್ಲ. ಆದರೆ ತಮ್ಮ ಈ ವ್ಯವಹಾರ ಹಾಗೂ ಪರಸೇವೆ, ಲಿಂಗಾರ್ಚನೆ ಮತ್ತು ಜಂಗಮದಾಸೋಹಕ್ಕೆ ಈ ಎರಡೂ ಮೂಲತಃ ಆಧ್ಯಾತ್ಮಿಕವಾದ ಕ್ರಿಯೆಗಳು. ಇದು ತಮ್ಮ ಸ್ವಾರ್ಥಕ್ಕಾಗಿ ಅಥವಾ ಕೇವಲ ಉದರಪೋಷಣೆಯ ಏಕೈಕ ಉದ್ದೇಶಕ್ಕಾಗಿ ಅಲ್ಲ. ಈ ಅಭಿಪ್ರಾಯವನ್ನು ಇನ್ನಷ್ಟು ಸಮರ್ಥಿಸುತ್ತಾ

***ಹೊತ್ತಾರೆ ಎದ್ದು ಕಣ್ಣು ಹೊಸೆವುತ್ತ***
***ಎನ್ನ ಒಡಲಿಂಗೆ, ಎನ್ನ ಒಡವೆಗೆ, ಎನ್ನ ಮಡದಿ***
***ಮಕ್ಕಳಿಗೆಂದು***

*ಕುದಿದೆನಾದೊಡೆ ಎನ್ನ ಮನಕ್ಕೆ ಮನವೇ ಸಾಕ್ಷಿ*

..............................................................................

*ಹೊಲೆಹೊಲೆಯರ ಮನೆಯ ಹೊಕ್ಕಾದಡೆಯೂ,*
*ಸಲೆ ಕೈ ಕೂಲಿಯ ಮಾಡಿಯಾದಡೆಯೂ*
*ನಿಮ್ಮ ನಿಲುವಿಂಗೆ ಕುದಿವೆನಲ್ಲದೆ, ಎನ್ನೊಡಲವರಸಕ್ಕೆ ಕುದಿದೆನಾದಡೆ*
*ತಲೆದಂಡ! ಕೂಡಲಸಂಗಮದೇವಾ.*

(ವ. ೭೦೯, ಪು. ೨೮೩-೨೮೪)

ಎಂದು ಉದ್ಘೋಷಿಸುತ್ತಾರೆ. ಈ ಉದ್ಘೋಷ ಅತ್ಯಂತ ಪ್ರಾಮಾಣಿಕನಾದ ಮನುಷ್ಯನೊಬ್ಬನ ಕಳಕಳಿಯನ್ನು ಅತ್ಯಂತ ತೀವ್ರವಾಗಿ ಪ್ರಕಟಿಸುತ್ತದೆ. ಇಂಥ ಮಾತನ್ನು ಇಬ್ಬಂದಿತನದ ಬದುಕು ನಡೆಸುವ ಮನುಷ್ಯ ಹೇಳಲಾರ. ತಮ್ಮ ಪದವಿ-ಅಧಿಕಾರಗಳನ್ನು ತಮ್ಮ ಸ್ವಾರ್ಥಕ್ಕೆ ಬಳಸುತ್ತಿರುವುದಾಗಿ ಯಾರಾದರೂ ತೋರಿಸಿಕೊಟ್ಟರೆ ತಮ್ಮ ತಲೆಯನ್ನೇ ದಂಡವಾಗಿ ಒಪ್ಪಿಸುವುದಾಗಿ ಸಾರುವ ಈ ಮಾತು, ಅತ್ಯಂತ ಪ್ರಾಮಾಣಿಕವಾದ ಹಾಗೂ ದಿಟ್ಟತನದ ಮಾತಾಗಿದೆ.

ಇಂಥ ವ್ಯಕ್ತಿತ್ವವನ್ನು ಕುರಿತು ಇನ್ನೂ ಕೆಲವು ಆಪಾದನೆಯ ಮಾತುಗಳು ಬಂದಿರಬೇಕು. ಬಿಜ್ಜಳನ ಭಂಡಾರದ ಹಣವನ್ನು ಬಸವಣ್ಣನವರು ಬಳಸಿಕೊಂಡಿರಬಹುದು ಎನ್ನುವುದು ಅವುಗಳಲ್ಲಿ ಒಂದು, ದಿನವೂ ಅವರು ನಡೆಸುತ್ತಿದ್ದ ಲಿಂಗಾರ್ಚನೆ, ಜಂಗಮ ದಾಸೋಹ ಇತ್ಯಾದಿಗಳನ್ನು ಕಂಡು ಆಗದವರು, ಅಂದರೆ 'ಪರವಾದಿಗಳು' ಈ ಆರೋಪವನ್ನು ಮಾಡಿರಬಹುದು. ಇಂಥ ಮಾತಿಗೆ ಬಸವಣ್ಣನವರು-

*ಊರ ಮುಂದ ಹಾಲ ಹಳ್ಳ ಹರಿವುತ್ತಿರಲು*
*ಓರೆಯಾವಿನ ಬೆನ್ನಲಿ ಹರಿಯಲದೇಕಯ್ಯಾ?*
*ಲಜ್ಜೆಗೆಡಲೇಕೆ ? ನಾಣುಗೆಡಲೇಕೆ ?*
*ಕೂಡಲಸಂಗಮದೇವರುಳ್ಳನ್ನಕ್ಕ*
*ಬಿಜ್ಜಳನ ಭಂಡಾರವೇನಗೇಕಯ್ಯಾ?*

(ವ. ೩೪೫, ಪು. ೩೦೧)

ಎಂದು ಉತ್ತರ ಕೊಟ್ಟಂತೆ ತೋರುತ್ತದೆ. ಇಲ್ಲಿ 'ಊರ ಮುಂದೆ ಹಾಲ ಹಳ್ಳ ಹರಿವುತ್ತಿರಲು ಓರೆಯಾವಿನ ಬೆನ್ನಲ್ಲಿ ಹರಿಯಲದೇಕಯ್ಯಾ?'- ಎಂಬ ಮಾತು, ತಾನೇ ತಾನಾಗಿ ಸಮೃದ್ಧವಾದ ನೆರವು ಲಭಿಸುತ್ತಿರುವಾಗ, ಬಿಜ್ಜಳನ ಹಣದ ಮೇಲೆ ಅವಲಂಬಿಸುವ ಅಗತ್ಯ ತಮಗಿಲ್ಲ ಎಂಬುದನ್ನು ಸೂಚಿಸುತ್ತದೆ. ಓರೆಯಾವು ಎಂದರೆ, ಹಾಲನ್ನು ಜಿನುಗಿಸುವ ಅಥವಾ ಬಂಜೆಯಾದ ಅಥವಾ ಗೊಡ್ಡಾದ ಹಸು ಎಂಬ ಅರ್ಥವನ್ನು ವಿದ್ವಾಂಸರು ಕೊಡುತ್ತಾರೆ. ಊರೆದುರು ಹಾಲಿನ ಹಳ್ಳವೇ ಹರಿಯುವಾಗ, ಇಂಥ 'ಓರೆಯಾವನ್ನು' ಬೆನ್ನು ಹತ್ತುವುದು, ಹಾಗೆಯೇ ಬಿಜ್ಜಳನ ಭಂಡಾರದ ಕಡೆ ಕಣ್ಣು ಹಾಯಿಸುವುದು. ಈ ಬಗ್ಗೆ ನಾಚಿಕೆಪಟ್ಟುಕೊಳ್ಳುವಂಥದೇನಿದೆ. ತಮ್ಮ ಪರವಾಗಿ 'ಕೂಡಲ ಸಂಗಮದೇವರು' ಇರುವಾಗ 'ಬಿಜ್ಜಳನ ಭಂಡಾರವೇನಗೇಕಯ್ಯಾ'?- ಎಂಬ ಮುಂದಿನ ಮಾತು, ತಮಗೊದಗುವ ಧನಸಹಾಯ 'ಊರ ಮುಂದಿನ ಹಾಲುಹಳ್ಳದಂಥದ್ದು; ಅಷ್ಟೇ ಅಲ್ಲ, ತಮ್ಮ ಈ ಕಾರ್ಯಭಾಗದ ಹಿಂದೆ ಕೂಡಲಸಂಗಮನೇ ನಿಂತಿದ್ದಾನೆ, ಇದಿಷ್ಟೂ ಈ ವಚನದ ಅರ್ಥ.

ಈ ಒಂದು ವಚನವನ್ನು ಗಮನಿಸಿ, ಬಸವಣ್ಣನವರು ಬಿಜ್ಜಳನ ಭಂಡಾರದಿಂದ ಸ್ವಲ್ಪಹಣವನ್ನು ತಮ್ಮ ಜಂಗಮ ದಾಸೋಹಾದಿಗಳಿಗೆ ಬಳಸಿರಬಹುದೆಂದೂ, ಇಲ್ಲದಿದ್ದರೆ ಹಾಗೆ ಖರ್ಚು ಮಾಡಲಿ ಅವರಿಗೆ ಅಷ್ಟೊಂದು ಹಣ ಬಂದುದಾದರೂ ಹೇಗೆ ಎಂದು ತರ್ಕಿಸುತ್ತ 'ಊರ ಮುಂದೆ ಹರಿಯುತ್ತಿದ್ದ 'ಹಾಲುಹಳ್ಳ' ಯಾವುದೋ ತಿಳಿಯದು'-ಎಂಬಂಥ ಅಭಿಪ್ರಾಯಗಳೂ ವ್ಯಕ್ತವಾಗಿವೆ. ನಮ್ಮ ಸಮಕಾಲೀನ ಅಧಿಕಾರಿಗಳ ನಡವಳಿಕೆಯನ್ನು ನೋಡಿ, ಬಹುಶಃ ಬಸವಣ್ಣನವರೂ, ಬಿಜ್ಜಳನ ಭಂಡಾರದ ಹಣದ ಸ್ವಲ್ಪ ಭಾಗವನ್ನು ಬಳಸಿಕೊಂಡಿರಬಹುದು. ಆದುದರಿಂದ ಇಂಥ ಆಪಾದನೆಯ ಮಾತುಗಳಿಗೆ ಬಸವಣ್ಣನವರು ಉತ್ತರ ಕೊಡುವ ಸಂದರ್ಭ ಈ ವಚನದಿಂದ ಸ್ಪಷ್ಟವಾಗುತ್ತದೆ- ಎಂದು ತೀರ್ಮಾನಕ್ಕೆ ಬರುವುದು ತೀರಾ ಸಹಜ ಕೂಡ. ಆದರೆ, ಈ ಬಗೆಯ ಒಂದು 'ಆಪಾದನೆ' ಆ ಕಾಲದಲ್ಲಿ ಬಂದಿರುವುದು ಆಶ್ಚರ್ಯದ ಸಂಗತಿಯಲ್ಲವಾದರೂ, ಅದನ್ನು ಇಂದು ಪರಿಶೀಲಿಸುವ ನಾವು, ಯಾವುದರ ಮೇಲೆ ಹೆಚ್ಚು ಒತ್ತನ್ನು ಕೊಟ್ಟು ವಿಚಾರದಲ್ಲಿ ತೊಡಗಿದ್ದೇವೆ ಎನ್ನುವುದು ಬಹುಮುಖ್ಯವಾದದ್ದು. ಬಸವಣ್ಣನವರ ವಚನಗಳಷ್ಟನ್ನೂ ಸರಿಯಾಗಿ ನೋಡಿದವರಿಗೆ ಮುಖ್ಯವಾಗಿ ಕಾಣಿಸುವುದು ಅವರ ನಿರಂತರ ಆತ್ಮನಿರೀಕ್ಷೆ ಮತ್ತು ಅದರಿಂದ ನಿಷ್ಪನ್ನವಾಗುವ ಪ್ರಾಮಾಣಿಕತೆ. ಇಷ್ಟರಮಟ್ಟಿಗೆ ತನ್ನನ್ನು ತಾವು ಮುಚ್ಚುಮರೆಯಿಲ್ಲದೆ ಬಿಚ್ಚಿಟ್ಟುಕೊಳ್ಳುವ ಈ ವ್ಯಕ್ತಿ, ಬಿಜ್ಜಳನ ಭಂಡಾರದ ಹಣವನ್ನು





ತಾನು ಬಳಸಿಕೊಳ್ಳಲಿಲ್ಲ (ಬಿಜ್ಜಳವ ಭಂಡಾರವೆನಗೇಕಯ್ಯಾ'; ಎನ್ನೊಡಲವಸರಕ್ಕೆ ಕುದಿದೆನಾದಡೆ ತಲೆದಂಡ!) ಎಂದು ಹೇಳಿದ ಮಾತನ್ನು, ನಂಬದೆ ಅಥವಾ ಅದು ಪ್ರಾಮಾಣಿಕವಾದುದಲ್ಲ ಎಂದು ಶಂಕಿಸುತ್ತ, ಬಿಜ್ಜಳನ ಭಂಡಾರದ ಹಣವನ್ನು ಬಸವಣ್ಣನವರು ಸ್ವಲ್ಪಮಟ್ಟಿಗಾದರೂ ಬಳಸಿಕೊಂಡಿರಬಹುದು ಎಂದು ಭಾವಿಸುವುದು ಆ ವ್ಯಕ್ತಿತ್ವಕ್ಕೆ ಮಾಡುವ ಅಪಚಾರವೇ ಸರಿ. ಹಾಗಾದೆ ಓರೆಯಾವಿನಂತಹ ಬಿಜ್ಜಳಾ ಭಂಡಾರವನ್ನು ನೆಚ್ಚದೆ ಇರಬೇಕಾದರೆ **'ಊರ ಮುಂದೆ ಹರಿಯುವ ಹಾಲ ಹಳ್ಳ'** ಯಾವುದು? -ಎಂಬ ಪ್ರಶ್ನೆ ಉಚಿತವಾದದ್ದೆ. ಬಸವಣ್ಣನವರು ತಮ್ಮನ್ನು ತೊಡಗಿಸಿಕೊಡ ಆಂದೋಳನದಲ್ಲಿ ಬಹುಸಂಖ್ಯಾತ ಸಾಮಾನ್ಯ ಜನರಿದ್ದರೆಂಬುದೇನೋ ನಿಜವೇ; ಹಾಗೆಂದರೆ, ಹಾಗೆ ಬಂದು ಕೂಡಿಕೊಂಡವರೆಲ್ಲಾ, ತೀರಾ ದಟ್ಟ ದರಿದ್ರರೆಂದೂ, ಬಸವಣ್ಣನವರ ಈ ಲಿಂಗಾರ್ಚನೆ, ಜಂಗಮ ದಾಸೋಹ ಅಂಥವರಿಗೆ ಒಂದು ಜೀವನೋಪಾಯವಾಗಿತ್ತೆಂದೂ ಭವಿಸುವುದು ಸರಿಯಲ್ಲ. ಅಂದಿನ ಸಮಾಜದ ವಿವಿಧ ಸ್ತರಗಳಿಂದ ಬಂದು ಕೂಡಿಕೊಂಡವರಲ್ಲಿ ರಾಜ್ಯದ ಶ್ರೀಮಂತ ವರ್ಗದವರು, ವರ್ತಕರು ಮತ್ತು ತಕ್ಕಷ್ಟು ಅನು ಕೂಲವಂತರೂ ಇದ್ದಿರಬಹುದು. ಮೋಳಿಗೆ ಮಾರಯ್ಯ ನಂಥವರು ಒಂದು ದೇಶದ ರಾಜನಾಗಿದ್ದವನು ಎಂಬುದನ್ನು ಗಮನಿಸಬೇಕು. ಇವರೆಲ್ಲ ತಮ್ಮ ತಮ್ಮ ಗಳಿಕೆಯ ಒಂದಿಷ್ಟು ಭಾಗವನ್ನು ಬಸವಣ್ಣನವರ ಈ ಕಾರ್ಯಕ್ಕೆ ಒದಗಿಸಿರಬಹುದು. ಈ ಸಾಮೂಹಿಕ ಸಂಪತ್ತಿನ ಸಂಚಯವೇ ಊರ ಮುಂದೆ ಹರಿಯುತ್ತಿದ್ದ 'ಹಾಲಹಳ್ಳ' ಜತೆಗೆ ಕೂಡಲ ಸಂಗಮನನ್ನೇ ನಂಬಿ ('ಕೂಡಲ ಸಂಗಮದೇವರುಳ್ಳನ್ನಕ್ಕ') ಬಸವಣ್ಣನವರು ನಡೆಸುತ್ತಿದ್ದ ಅಭೂತಪೂರ್ವವಾದ ಕಾರ್ಯಕ್ಕೆ ಹೇಗೋ ಅವರಿವರಿಂದ ಧನ-ಜನ ಸಹಾಯ ಒದಗಿರಬೇಕು. ಎಲ್ಲ ಕಾಲದಲ್ಲೂ ಈ ಬಗೆಯ ನಿಸ್ವಾರ್ಥವಾದ ಕಾರ್ಯಗಳಿಗೆ, ಅದು ಹೇಗೋ, ದೈವ ಸಹಾಯವೆಂಬಂತೆ ಹಲವು ಹತ್ತು ಕಡೆಗಳಿಂದ ನೆರವು ಒದಗಿಬರುತ್ತದೆಂಬುದು ತಿಳಿದ ಸಂಗತಿಯಾಗಿದೆ. ಆದುದರಿಂದ ಅತ್ಯಂತ ಪ್ರಾಮಾಣಿಕವಾದ ಬಸವಣ್ಣನವರು ಈ ಬಗೆಗೆ ಹೇಳಿದ ಮಾತುಗಳನ್ನು ನಾವು ಸಂಶಯದಿಂದ ನೋಡಬೇಕಾಗಿಲ್ಲ, ಯಾಕೆಂದರೆ-

*ತಾಳಮರದ ಕೆಳಗೆ ಹಾಲ ಹರವಿಯಿದ್ದಡೆ*
*ಅದ ಹಾಲ ಹರವಿಯೆನ್ನರು; ಸುರೆಯ ಹರವಿ ಎಂಬರು*

(ವ.೯೦, ಪು.೪)

ಈ ಮಾತು ಭಂಡಾರಿಯಾಗಿ ಬಿಜ್ಜಳನಲ್ಲಿ ಕೆಲಸ ಮಾಡುತ್ತಿದ್ದ ಬಸವಣ್ಣನವರ ನಡವಳಿಕೆಯನ್ನು ಕುರಿತು, ತಿಳಿಯದ ಜನ ತಾಳುವ ನಿಲುವಿಗೆ ಒಡ್ಡಿದ ಒಂದು ಪ್ರತಿಮೆಯಾಗಿದೆ. ಬಸವಣ್ಣನವರು ಬಿಜ್ಜಳನ ಭಂಡಾರದ ಹಣವನ್ನು ದುರುಪಯೋಗಪಡಿಸಿಕೊಂಡಿರಬಹುದು ಎಂದು ತರ್ಕಿಸುವವರು, ತಾಳಮರದ ಕೆಳಗಣ ಹಾಲ ಹರವಿಯನ್ನು ಸುರೆಯ ಹರವಿ ಎಂದುಕೊಳ್ಳುವವರು, ಹಾಗೆಂದುಕೊಳ್ಳುವುದು ತಪ್ಪಲ್ಲವಾದರೂ, ಈ ವಸ್ತುಗಳ ಅಸ್ತಿತ್ವ ಸಂದರ್ಭದ ಮಹಿಮೆ, ಯಾರನ್ನಾದರೂ ಆ ರೀತಿ ವಿಚಾರ ಮಾಡಲು ಅವಕಾಶ ಕೊಡುತ್ತದೆ.

ಒಟ್ಟಿನಲ್ಲಿ ಬಿಜ್ಜಳನಂಥ ರಾಜನ ಕೆಳಗೆ ಉದ್ಯೋಗವನ್ನು ಒಪ್ಪಿಕೊಳ್ಳಬೇಕಾಗಿದ್ದ ಬಸವಣ್ಣನವರ ಬದುಕು ಈ ಎಲ್ಲ ಅಪವಾದ ಹಾಗೂ ಸಂಘರ್ಷಗಳನ್ನು ಎದುರಿಸಬೇಕಾಗಿ ಬಂದದ್ದು ತೀರಾ ಸಹಜವಾಗಿದೆ. ಅವರನ್ನು ಕುರಿತು ಬಂದ ಅಪವಾದಗಳೇನೇ ಇರಲಿ, ಅವರಂತೂ ವ್ಯವಹಾರ ಹಾಗೂ ಆಧ್ಯಾತ್ಮಗಳನ್ನು ಬೆರಸದೆ, ತಮ್ಮ ವ್ಯಕ್ತಿತ್ವವನ್ನು, ಎಲ್ಲ ಬಗೆಯ ಹೋರಾಟಗಳಿಗೂ ಒಡ್ಡಿಕೊಂಡು ದಿಟ್ಟತನದಿಂದ ನಿಂತವರು, ರಾಜನ ಅರಮನೆಯ ಅಧಿಕಾರದಲ್ಲಿದ್ದ ಮಾತ್ರಕ್ಕೆ ತಮ್ಮನ್ನು ಮಾರಿಕೊಂಡವರಲ್ಲ. ತಮ್ಮನ್ನು ಕುರಿತು....

***ನ್ಯಾಯನಿಷ್ಠುರಿ ದಾಕ್ಷಿಣ್ಯಪರನು ನಾನಲ್ಲ,***
***ಲೋಕ ವಿರೋಧಿ ಶರಣನಾರಿಗಂಜುವನಲ್ಲ***
***ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ.***

(ವ. ೭೫೩, ಪುಟ: ೩೦೧)

ಎಂದು ಹೇಳಿಕೊಳ್ಳುವುದರ ಮೂಲಕ, ತಮ್ಮ ಸಮಸ್ತ ವ್ಯಕ್ತಿತ್ವವೂ 'ಕೂಡಲಸಂಗಮದೇವರ ರಾಜತೇಜ'ದಲ್ಲಿರುವುದರಿಂದ ತಾವು ಯಾರಿಗೂ ಹೆದರಬೇಕಾಗಿಲ್ಲವೆಂಬುದನ್ನು ಸ್ಪಷ್ಟಪಡಿಸಿಕೊಂಡರು. ತಮ್ಮ ವ್ಯವಹಾರ ಭೂಮಿಕೆಯನ್ನು, ಆಧ್ಯಾತ್ಮಿಕ ಭೂಮಿಕೆಯನ್ನು ಅವರು ಒಂದರೊಳಗೊಂದು ಬೆರೆಸಿಕೊಂಡವರಲ್ಲ. ಇದೊಂದು ಅಪೂರ್ವವಾದ ಜಾಣ್ಮೆ ಅಥವಾ ವಿವೇಕ. ರಾಜನೊಬ್ಬನ ಆಸ್ಥಾನದಲ್ಲಿದ್ದುಕೊಂಡೂ, ಈ ಬಗೆಯ ದಿಟ್ಟತನ ನಿಲುವುಗಳನ್ನು ತಾಳುತ್ತ, ಇತ್ತ ಅರಮನೆಯಿಂದಾಚೆಯ ಸಾಮಾಜಿಕ-

ಧಾರ್ಮಿಕ ಚಳುವಳಿಯನ್ನು ತೊಡಗಿಸಿಕೊಳ್ಳುತ್ತ ಇದ್ದ ಬಸವಣ್ಣನವರು, ಎಲ್ಲಿನತನಕ ತಮ್ಮ ಹಾಗೂ ರಾಜ ಬಿಜ್ಜಳನ ನಡುವಣ ಸಂಬಂಧಗಳು ಒಡೆಯದೆ ಇದ್ದುವೋ ಅಷ್ಟು ಕಾಲ ರಾಜನೊಂದಿಗೆ ಪ್ರೀತಿ–ವಿಶ್ವಾಸಗಳಿಂದಲೇ ಇದ್ದಿರಬಹುದು. ರಾಜನಾದ ಬಿಜ್ಜಳ ಕೂಡಾ ಬಸವಣ್ಣನವರ ಪ್ರಾಮಾಣಿಕವಾದ ನಿಲುವುಗಳನ್ನು ತಕ್ಕಷ್ಟು ಚೆನ್ನಾಗಿಯೇ ಅರ್ಥಮಾಡಿಕೊಳ್ಳುತ್ತ ಗೌರವದಿಂದ ನಡೆಯಿಸಿಕೊಂಡಿರಬಹುದು. ಅಥವಾ ಅಂದಿನ ಜನಸಮೂಹದ ಪ್ರೀತಿ–ಗೌರವಗಳನ್ನು ಗಳಿಸಿಕೊಂಡು ಒಂದು ರೀತಿಯಲ್ಲಿ ನಾಯಕನಾದ ಬಸವಣ್ಣನವರನ್ನು ಎದುರುಹಾಕಿಕೊಳ್ಳುವ ಅಚಾತುರ್ಯಕ್ಕೆ ಕೈಹಾಕದೆ, ವ್ಯವಹಾರ ನಿಪುಣನಂತೆ ನಡೆದುಕೊಂಡಿರಬಹುದು. ಆನಂತರ ಅವರಿಬ್ಬರ ಸಂಬಂಧಗಳು ಏನಾಗಿರಬಹುದುದೋ ಅದು ಇಲ್ಲಿ ಅಪ್ರಸುತ.

ಬಸವಣ್ಣನವರ ಹಾಗೂ ಒಟ್ಟಾರೆಯಾಗಿ ವಚನಕಾರರ ಈ ಜನಪರವಾದ ಮತ್ತು ಅನುಭಾವಿಕವಾದ ನಿಲುವುಗಳನ್ನು ಹಲವರು ಇದು ಸ್ಪಷ್ಟವಾಗಿ ರಾಜ ವಿರೋಧಿ ಧೋರಣೆ ಎಂದು ಭಾವಿಸುವಂತೆ ತೋರುತ್ತದೆ. ಈ ಭಾವನೆ, ಬಸವಣ್ಣನವರ ಚಳುವಳಿಯ ಬಗೆಗೆ ಒಂದು ಆಕ್ಷೇಪಣೆಯನ್ನು ಮುಂದಿಡುತ್ತದೆ. ಅದೆಂದರೆ, ಕೆಳವರ್ಗದ ಜನಸಮೂಹದಿಂದ ಸಂಘಟಿತವಾದ ಈ ಆಂದೋಳನ ಅಂದಿನ ಕರ್ನಾಟಕದ ರಾಜಕೀಯ ಚರಿತ್ರೆಯನ್ನೇ ಬದಲಿಸಬಹುದಾಗಿತ್ತು; ಆದರೆ ಬಸವಾದಿಗಳು ಕೇವಲ ಆಧ್ಯಾತ್ಮಿಕವಾದ ತಿರುಳನ್ನು ಕೊಡುವುದರ ಮೂಲಕ ಈ ಜನತಾ ಕ್ರಾಂತಿಯನ್ನು ವಿಫಲವನ್ನಾಗಿ ಮಾಡಿದರು.

ಆದರೆ ಗಮನಿಸಬೇಕು, ಬಸವಾದಿಗಳು ಸಂಘಟಿಸಿದ ಈ ಆಂದೋಳನದ ಉದ್ದೇಶ ಖಂಡಿತ ರಾಜಕೀಯವಾದುದ್ದಲ್ಲ; ಅದೊಂದು ಸಾಮಾಜಿಕ–ಧಾರ್ಮಿಕ ಆಂದೋಳನ. ಅದರಲ್ಲಿ ಖಂಡಿತವಾಗಿಯೂ ಪ್ರತಿಭಟನೆಯ ಅಂಶಗಳಿವೆ. ಅದು ವರ್ಣಾಶ್ರಮ ಧರ್ಮದ ವಿರುದ್ಧವಾದುದು; ಸಾಮಾನ್ಯವರ್ಗದವರನ್ನು ಅನುಭಾವಿಕ ನೆಲೆಯಲ್ಲಿ ತೊಡಗಿಸಿ, ಅವರಿಗೆ ತಾವೆಲ್ಲ ಸಮಾನರೆಂಬ ಭಾವನೆಯನ್ನು ಪ್ರಚೋದಿಸಿ, ಅವರಿಗೆ ಒಂದು ಬಗೆಯ ಮಾನಸಿಕ ಸ್ಥೈರ್ಯವನ್ನು ತಂದುಕೊಟ್ಟು, ಸಮಾಜದ ಉಚ್ಚವರ್ಣದವರೆದುರು ಬಂಡೇಳುವಂತೆ ಮಾಡಿದ್ದು ಈ ಆಂದೋಲನದ ಒಂದು ಮಹತ್ಸಾಧನೆಯಾಗಿದೆ. ಆದರೆ ಅದು ರಾಜವಿರೋಧಿ ಅಥವಾ ರಾಜಶಾಹೀ ವಿರೋಧೀ ನಿಲುವಂತೂ ಅಲ್ಲ.

ಆದರೆ, ರಾಜತ್ವ ಅದರ ದರ್ಪ–ಭೋಗ–ವೈಭವಗಳು ಇತ್ಯಾದಿಗಳ ಬಗ್ಗೆ, ಅದನ್ನು ತೀರಾ ನಿಕೃಷ್ಟವಾಗಿ ಭಾವಿಸುವಂತಹ ಒಂದು ಆಧ್ಯಾತ್ಮಿಕ ದೃಷ್ಟಿಕೋನವನ್ನು ಈ ಆಂದೋಳನ ಗಟ್ಟಿಗೊಳಿಸಿತು. ರಾಜತ್ವವನ್ನಾಗಲೀ ದೊಡ್ಡದೆಂದೂ, ಆ ಕಾರಣಕ್ಕಾಗಿ ಅದನ್ನು ತಾವು ಪ್ರತಿಭಟಿಸಬೇಕೆಂಬ ಅಥವಾ ತಾವು ಅದನ್ನು ಆಕ್ರಮಿಸಿಕೊಳ್ಳಬೇಕೆಂಬ ಯಾವ ಉದ್ದೇಶಗಳೂ ಈ ಸಂಘಟನೆಗೆ ಇರಲಿಲ್ಲ. ಜತೆಗೆ ಇದಕ್ಕೆ ಹಿಂದಿನ ಶತಮಾನಗಳಲ್ಲಿಯಂತೆ, ರಾಜನನ್ನು ಕುರಿತು ನಿಷ್ಠೆ, ರಾಜನಿಗಾಗಿ ತಮ್ಮ ಪ್ರಾಣವನ್ನೇ ಮುಡುಪಾಗಿಡಬೇಕೆಂಬ ಶ್ರದ್ಧೆ, ಜೋಳವಾಳಿ, ವೇಳೆವಾಳಿಗಳನ್ನು ಒಂದು ಮೌಲ್ಯವೆಂಬಂತೆ ಭಾವಿಸುವ ಪ್ರವೃತ್ತಿ * ಈ ಕಾಲದ, ಕರ್ನಾಟಕದ ಈ ಭಾಗದಲ್ಲಿ ತನ್ನರ್ಥವನ್ನು ಬಹುಶಃ ಕಳೆದುಕೊಳ್ಳತೊಡಗಿತ್ತು. ಇದಕ್ಕೆ ಅಂದಿನ ರಾಜಕೀಯ ಅಸ್ಥಿರತೆಯೂ ಒಂದು ಕಾರಣವಾದರೆ, ಬಸವಾದಿಗಳಿಂದ ಸಂಘಟಿತವಾದ ಭಕ್ತಿಮೂಲವಾದ ಈ ಚಳುವಳಿಯೂ ಮತ್ತೊಂದು ಕಾರಣವೆನ್ನಬಹುದು. ಈ ಚಳುವಳಿ, ವ್ಯಕ್ತಿಯಾದವನು ತನ್ನ ವಿಧೇಯತೆಯನ್ನು ರಾಜನ ಬದಲು ದೇವರ ಕಡೆ ಕೇಂದ್ರೀಕರಿಸುವ ದಿಕ್ಕಿನಲ್ಲಿ ಮನಸ್ಸನ್ನು ಸಿದ್ಧಗೊಳಿಸಿತು. ಹೀಗಾಗಿ ರಾಜನನ್ನು ಧಿಕ್ಕರಿಸುವ ಅಥವಾ ರಾಜತ್ವವನ್ನು ಪ್ರತಿಭಟಿಸುವ 'ರಾಜಕೀಯ' ನಿಲುವುಗಳು ಇಲ್ಲಿ ಮುಖ್ಯವಾಗಿದೆ; ರಾಜ, ರಾಜತ್ವ ಇತ್ಯಾದಿಗಳನ್ನು ಮೀರಿದ ಆಧ್ಯಾತ್ಮಿಕ ಮನಃಸ್ಥಿತಿಯನ್ನು ಸಾಧಿಸುವುದು ಮುಖ್ಯವಾಯಿತು. ಹಾಗೆ ನೋಡಿದರೆ ನಿಜವಾದ ರಾಜವಿರೋಧಿ ಧೋರಣೆ ಭಾರತೀಯ ಪರಿಸರದಲ್ಲಿ ಸ್ಪಷ್ಟವಾಗಿ ಮೂಡಿದ್ದು ಆಧುನಿಕ ಕಾಲದಲ್ಲಿಯೇ. ಇದು ವಾಸ್ತವವಾಗಿ ಪ್ರಜಾಪ್ರಭುತ್ವಗಳ ಪರಿಣಾಮ. ಹಿಂದೆ ಭಾರತದ ಚರಿತ್ರೆಯಲ್ಲಿ ಈ ಬಗೆಯ ಪ್ರಜಾಪ್ರಭುತ್ವವಾದಿ ನಿಲುವುಗಳಿರಲೇ ಇಲ್ಲ. ಹಿಂದಿನ ಜನ ಒಂದೊಂದು ಸಲ ರಾಜನನ್ನು ಕುರಿತು, ಅಂದರೆ ನಿರ್ದಿಷ್ಟವಾದ ರಾಜರೆಂಬ ವ್ಯಕ್ತಿಗಳನ್ನು ಕುರಿತು ಆಗಾಗ ಬಂಡಾಯವೆದ್ದಿರಬಹುದು; ಆದರೆ ರಾಜತ್ವ ವಿರೋಧಿ ಧೋರಣೆಯೊಂದು ಯಾವ ಕಾಲದಲ್ಲೂ ರೂಪುಗೊಂಡಂತೆ ಕಾಣುವುದಿಲ್ಲ. ಈ ಧೋರಣೆ ಸಂಪೂರ್ಣವಾಗಿ ಆಧುನಿಕ ಕಾಲದ್ದು.

* ಜೋಳವಾಳಿಯಾನಲ್ಲ, ವೇಳೆವಾಳಿಯವ ನಾನಯ್ಯ
ಹಾಳುಗೆಟ್ಟೋಡುವ ಆಳು ನಾನಲ್ಲಯ್ಯಾ

(ಕೃಪೆ: ಶಿವಪ್ರಭೆ)

*





## ಶ್ರಾವಣ ಬಂತು ಶ್ರಾವಣ

–ಯು.ಎಸ್. ಸಂಗನಾಳಮಠ *

ಆಷಾಡ ಎಂದರೆ ಆಕಾಶದಲ್ಲಿ ಕಪ್ಪನೆಯ ಮೋಡ, ಜಿಡಿಜಿಡಿಮಳೆ, ತಂಪಾದ ಗಾಳಿ, ರಸ್ತೆಯುದ್ದಕ್ಕೂ ಕೆಸರು, ಆಷಾಡ ಎಂದರೆ ಎಲ್ಲದಕ್ಕೂ ನಿಷೇಧ. ಮಂಗಳಕಾರ್ಯಗಳು ನಡೆಯುವಂತಿಲ್ಲ. ಹೊಸದಾಗಿ ಮದುವೆಯಾದವರಿಗೆ ಅತ್ತೆ–ಸೊಸೆ ಒಂದೆಡೆ ಇರಬಾರದೆಂಬ ಸಂಪ್ರದಾಯ. ಅತ್ತೆ–ಅಳಿಯ ಕೂಡ ಒಂದೇ ಹೊಸ್ತಿಲು ದಾಟಬಾರದೆಂಬ ಶಾಸ್ತ್ರ. ಬಹುಶಃ ಇದೊಂದು ಕಾರಣದಿಂದ ಅತ್ತೆಯ ಮನೆ ಇನ್ನು ಹೊಂದಿಕೆಯಾಗದ್ದರಿಂದ ತವರಿನಲ್ಲಿ ಇರಲಿ ಎಂಬ ಉದ್ದೇಶ ಇರಬಹುದು. ಕವಿ ಬೇಂದ್ರೆ 'ಆಷಾಡಮಾಸದಿ ವಿರಹಿ ಯಕ್ಷನ ಸುಯಿಲು..' ಎನ್ನುತ್ತಾರೆ. ಹಾಗೆ ಭೂಮಿಯಲ್ಲಿ ನವ ವಿವಾಹಿತೆಗೆ ವಿರಹವೇದನೆ. ಇಂಥ ಆಷಾಡದ ನಂತರ ಬರುವುದು ಶ್ರಾವಣ ಎಂದರೆ ಎಲ್ಲೆಲ್ಲಿಯೂ ಸೊಗಸು, ಸಂತಸ, ಸಮೃದ್ಧಿ, ಹರುಷ, ಸೂರ್ಯ ಪ್ರಖರತೆ, ಹೊರಗಡೆ ನವಿರಾದ ಹೊಂಬಿಸಲಿನೊಂದಿಗೆ ನೆರಳಿನಾಡಿ ಆಡುವನು. ಆಗಾಗ ತುಂತುರು ಮಳೆಯ ತುಷಾರ ಸಿಂಚನ. ತುಂಬಿ ಹರಿಯುವ ನದಿ–ತೊರೆಗಳ ಜುಳು–ಜುಳು ನಿನಾದ. ಸಂಪಿಗೆ, ಕೇದಗೆ ಜಾಜಿ ಮಲ್ಲಿಗೆ ಸೇವಂತಿಗೆ ಹೂಗಳ ಮಧುರವಾಸನೆ. ಹಕ್ಕಿಗಳು ವಂಶಾಭಿವೃದ್ಧಿಗೆ ವಲಸೆ ಬರುವುದು. ಇದರ ಜೊತೆಗೆ ಸಾಲು–ಸಾಲು ಹಬ್ಬಗಳು. ಕವಿಗಳಿಗೆ ಕವನ ರಚಿಸಲು ಚೇತೋಹಾರಿ. ಅದಕ್ಕೆ ಬೇಂದ್ರೆ

*'ಶ್ರಾವಣ ಬಂತು ಕಾಡಿಗೆ ಬಂತು ನಾಡಿಗೆ*
*ಬಂತು ಬೀದಿಗೆ ಶ್ರಾವಣ ಬಂತು*
*ಕಡಲಿಗೆ ಬಂತು ಶ್ರಾವಣಾ ಕುಣಿದಾಂಗ ರಾವಣ*
*ಕುಣಿದಾವ ಗಾಳಿ ಭೈರವನ ರೂಪ ತಾಳಿ'*

ಇಲ್ಲಿ ನಿಸರ್ಗದ ಹೊಸತನ ಕಂಡುಬರುತ್ತದೆ. ಮೋಡಗಟ್ಟಿದ ಗುಡ್ಡದ ಮೇಲೆ ಮಳೆಗೆರೆಯುವಾಗ 'ಗುಡ್ಡ ಗುಡ್ಡ ಸ್ಥಾವರ ಲಿಂಗ – ಅದರ ಅಭ್ಯಂಗ' ಎನ್ನುತ್ತಾರೆ. ನಾಡಿನಲ್ಲಿ ವಾಸಿಸುವವರಿಗೆ ಭೀಮನ ಅಮವಾಸ್ಯೆಯಂದು ಪ್ರಾರಂಭವಾಗುವ ಹಬ್ಬಗಳ ಸಾಲು ನಾಗರಪಂಚಮಿ, ವರಮಹಾಲಕ್ಷ್ಮಿ, ಶ್ರಾವಣ ಸೋಮವಾರ, ಶ್ರಾವಣ ಶುಕ್ರವಾರ, ಶ್ರಾವಣ ಶನಿವಾರ ಹೀಗೆ ಸಾಗುತ್ತದೆ.

ನಾಗರಪಂಚಮಿ ನಾಡ ಹೆಣ್ಣಿಗೆ ಹಬ್ಬ. ಇದು ಅವರಿಗೆ ಮಾಂಗಲ್ಯಪ್ರದ ಹಬ್ಬ.

*ನಾಗರಪಂಚಮಿ ಎರೆಯೋಣ ನನ್ ಗೆಳತಿ*
*ನಾಗರ ಹೆಡೆಯಾಂಗ ಆಡೋಣ*
*ಅಳ್ಳಿಟ್ಟು ತಂಬಿಟ್ಟು ಮಾಡಿಟ್ಟೆ ಎಳ್ಳುಂಡೆ*
*ದಳ್ಳುರು ಕಣ ಹಡೆಯಾನ ಕೊರಳಾನ*
*ನಾಗ ನಿನಗೆಡೆಯೋ ಕೈಮುಗಿರೋ*

ಎಂದು ಹಾಡುತ್ತಾ ಜೋಕಾಲಿ ಜೀಕುತ್ತ ತವರು ಮನೆಗೆ ಬಂದ ಹೆಣ್ಣು ಗಂಡನ ಮನೆಯ ಆಯಾಸವನ್ನೆಲ್ಲ ನೀಗುತ್ತಾಳೆ. ಹೆಣ್ಣು ಹಿಗ್ಗಿನ ಹೂವಾಗುತ್ತಾಳೆ. ಪಂಚಮಿ ಹಬ್ಬ ಸಮೀಪಿಸುತ್ತಿದ್ದಂತೆ ಹೆಣ್ಣಿಗೆ ತವರು ಮನೆಯವರ ಕರೆ ಬರುತ್ತದೆ. ತನ್ನ ತಂದೆ ತಾಯಿ ಸೋದರ ಸೋದರಿರೊಡನೆ ಹಬ್ಬ ಆಚರಿಸುವ ಸಂಭ್ರಮ.

ನಾಗರಪಂಚಮಿಯಂದು ನಾಗನನ್ನು ಭಕ್ತಿ ಶ್ರದ್ಧೆ, ಆದರಗಳಿಂದ ಪೂಜಿಸುತ್ತಾರೆ. ನಾಗರಾಜ ದೇವರ ಪ್ರತಿರೂಪ. ಮಕ್ಕಳಿಗೆ ಚರ್ಮ ರೋಗ ಬರದಂತೆ ಕಾಪಾಡು. ಅರಿಯದೇ ನಮ್ಮಿಂದ ನಾಗದೋಷ ಆಗಿದ್ದರೆ ಮನ್ನಿಸು ಎಂದು ಪ್ರಾರ್ಥಿಸುತ್ತಾರೆ. ಸರ್ಪದೋಷ ಇದ್ದವರು ನಾಗಕ್ಷೇತ್ರಗಳಿಗೆ ಹೋಗಿ ನಾಗಪ್ರತಿಷ್ಠೆ, ಆಶ್ಲೇಷಾ ಪೂಜೆ, ಸರ್ಪಜಾತ ಪೂಜೆಗಳನ್ನು ಮಾಡುತ್ತಾರೆ. ವಿದುರಾಶ್ವತ್ಥ, ಸುಬ್ರಹ್ಮಣ್ಯಕ್ಷೇತ್ರ, (ಘಾಟಿ ಮತ್ತು ಕುಕ್ಕೆ) ಪ್ರಸಿದ್ಧವಾದವುಗಳು. ಪ್ರತಿ ಊರಿನಲ್ಲಿ ನಾಗರಕಲ್ಲುಗಳ ಪ್ರತಿಷ್ಠಾಪನವಾಗಿರುತ್ತವೆ ಪೂಜಿತವಾಗುತ್ತವೆ. ಹಲವು ಕ್ಷೇತ್ರಗಳಲ್ಲಿ ನಾಗರಾಜ, ಸುಬ್ರಹ್ಮಣ್ಯ, ಕುಮಾರಸ್ವಾಮಿ, ಮುರುಗ, ಷಣ್ಮುಖ, ನಾಗರೂಪಕ, ತಕ್ಷಕ ಮುಂತಾದ ಹೆಸರಿನಿಂದ ನೆಲೆಸಿರುತ್ತಾನೆ. ಭವತಾಪವನ್ನು ಹಿಂಗಿಸುತ್ತಾನೆ.

* ಉಪನ್ಯಾಸಕರು, 'ಜ್ಯೋತಿರ್ಲಿಂಗ' ಶಿವಮೊಗ್ಗ ರಸ್ತೆ, ೧ನೇ ಒಳತಿರುವು, ಹೈಸ್ಕೂಲ್ ಬಡಾವಣೆ, ಹೊನ್ನಾಳಿ.

ಕೆಲವೆಡೆ ನಾಗಪಂಚಮಿಯನ್ನು ಗರುಡಪಂಚಮಿ ಎನ್ನುತ್ತಾರೆ. ನಾಗಪಂಚಮಿ, ಪೌರಾಣಿಕ ಕಥೆಗಳ ಹಿನ್ನೆಲೆಯೂ ಇದೆ. ನಾಗರಪಂಚಮಿಗೆ ಉಂಡಿಯ ಹಬ್ಬ ಎನ್ನುವರು ಅಂದಿನ ದಿನ ತರಹ-ತರಹದ ಉಂಡಿಗಳನ್ನು ಮಾಡಿ, ಜೊತೆಗೆ ಚಕ್ಕುಲಿ-ಕೋಡಬಳೆ ಮಾಡಿ ತಿನ್ನುವ ಸಂಪ್ರದಾಯವಿದೆ. ನಾಗರಪಂಚಮಿ ಮರುದಿನ ಬರುವುದು ಸಿರಿಯಾಳ ಷಷ್ಠಿ, ಭಕ್ತ ಸಿರಿಯಾಳನ ಸ್ಮರಣಾರ್ಥ, ಅಂದು ಗಂಡು ಮಕ್ಕಳಿರುವ ತಾಯಿ, ಚತುರ್ವಿಧ ಅನ್ನ ಮಾಡಿ (ಚಿತ್ರಾನ್ನ, ಮೊಸರನ್ನ, ತುಪ್ಪದನ್ನ, ಬೆಲ್ಲದನ್ನ) ಗಂಡುಮಕ್ಕಳಿರುವ ತಾಯಿಗೆ ಬಾಗಿನವನ್ನು ಕೊಡುತ್ತಾರೆ. **'ಮಂಗಳಗೌರಿ'** ವ್ರತ ಇನ್ನೊಂದು ಹಬ್ಬ. ವಿವಾಹಿತ ಹೆಣ್ಣುಮಕ್ಕಳು ವಿವಾಹದ ನಂತರ ೫ ವರ್ಷಕಾಲ ಈ ವ್ರತ ಆಚರಿಸುವರು. ಶ್ರಾವಣ ಮಾಸದಲ್ಲಿ ೪ ಅಥವಾ ೫ ವಾರ ಆಚರಿಸುವರು. ಶ್ರಾವಣ ಮಾಸದ ಇನ್ನೊಂದು ಹಬ್ಬ **'ವರಮಹಾಲಕ್ಷ್ಮಿ ವ್ರತ'**. ಈ ಮಾಸದ ಹುಣ್ಣಿಮೆಯ ಹಿಂದಿನ ಶುಕ್ರವಾರ ಲಕ್ಷ್ಮಿ ಪೂಜೆ ಮಾಡುವರು. ಶ್ರಾವಣ ಮಾಸದ ಶ್ರವಣ ನಕ್ಷತ್ರದಂದು ಉಪಾಕರ್ಮವನ್ನು ಬ್ರಾಹ್ಮಣ, ವೈಶ್ಯ, ಜೈನ, ದೇವಾಂಗ, ವಿಶ್ವಕರ್ಮ ಜನಾಂಗದವರು ಪ್ರಮುಖವಾಗಿ ಆಚರಿಸುವರು. ಗಾಯತ್ರಿ ಮಂತ್ರದೊಂದಿಗೆ ಗಾಯತ್ರಿಪೂಜೆ, ಹೋಮ ಹವನ ಮುಖ್ಯ. ಇಷ್ಟೇ ಅಲ್ಲದೆ ಶ್ರಾವಣ ಮಾಸದ ಪ್ರತಿ ಗುರುವಾರ ರಾಘವೇಂದ್ರನಿಗೆ ಪೂಜೆ ಸಲ್ಲಿಸುವರು. ಆದರೆ ಈ ಆಚರಣೆಗಳು ಗ್ರಾಮೀಣ ಪ್ರದೇಶದಲ್ಲಿ ಹೆಚ್ಚಾಗಿ ಕಂಡುಬಂದು; ಸಮಯ, ಶ್ರದ್ಧೆ, ಭಕ್ತಿಯ ಅಭಾವದಿಂದ ನಗರ ಪ್ರದೇಶಗಳಲ್ಲಿ ಆಚರಣೆಗಳು ಕುಂಠಿತವಾಗಿವೆ. ಅರಿವಿನಿಂದಲಾದರೂ ಆಚರಣೆ ನಡೆಯಬೇಕು.

ಶ್ರಾವಣಮಾಸ ಪ್ರಕೃತಿ ಸಂಪತ್ತನ್ನು ವರ್ಣಮಯವನ್ನಾಗಿಸಿ, ಜೀವ ಸಂಪತ್ತಿಗೆ ಜೀವನಾಧಾರಗಳನ್ನು ಒದಗಿಸಿ, ಧಾರ್ಮಿಕ ಆಚರಣೆಗಳಿಂದ ಮಾನವನ ಆಧ್ಯಾತ್ಮಿಕ ಸಂಪತ್ತು ಹೆಚ್ಚಾಗುತ್ತದೆ. ನವವಿಧ ಭಕ್ತಿಗಳಲ್ಲಿ ಮೊದಲನೆಯದು ಶ್ರವಣ ಭಕ್ತಿ ಮಾರ್ಗ. ಮಹಾತ್ಮರಿಂದ ಸಂತರಿಂದ ಪುರಾಣಪುಣ್ಯ ಕಥೆಗಳನ್ನು ಕೇಳುವುದು ಮೋಕ್ಷ ಪ್ರದಾಯಕ. ಧಾರ್ಮಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದು ಈ ಮಾಸದ ವೈಶಿಷ್ಟ್ಯ. ನಿಷ್ಕಾಮ ಭಾವನೆಯಿಂದ ವಾಸನಾರಹಿತವಾಗಿ ಶುದ್ಧ ಚಿತ್ತದಿಂದ ದೇವರನ್ನು ಆರಾಧಿಸುವುದೇ ನಿಜಭಕ್ತಿ ಅಥವಾ ದೃಢಭಕ್ತಿ. ಇಂಥ ಭಕ್ತಿ ದುಃಖನಿವೃತ್ತಿಗೆ ಪರಮಾನಂದ ಪ್ರಾಪ್ತಿಗೆ ಕಾರಣವಾಗುವುದು.

ಹೀಗೆ ಶ್ರಾವಣ ಮಾಸವು ಮನಸ್ಸಿಗೆ ಶಾಂತಿ ನೆಮ್ಮದಿ ಕೊಟ್ಟು, ಬಂಧು-ಬಾಂಧವರೊಂದಿಗೆ ಕೂಡಿ ನಲಿದಾಡಿ, ಹಬ್ಬದೊಂದಿಗೆ ಹಬ್ಬಗಳನ್ನು ತಂದು ಕಣ್ಮನಗಳನ್ನು ಸ್ಪಂದಿಸಿ, ವಿಶೇಷ ಪೂಜೆ, ಪುನಸ್ಕಾರ, ಮಂತ್ರ ಘೋಷಗಳೊಂದಿಗೆ ದೇವಾಲಯಗಳನ್ನು ಮನೆಗಳನ್ನು ಪಾವನಗೊಳಿಸಿ ಶ್ರವಣಾನಂದ, ಮನಕಾನಂದ ನೀಡುವ ವಿಶಿಷ್ಟ ಮಾಸವಾಗಿದೆ. ಶ್ರಾವಣ ಮಾಸ ಮನುಷ್ಯನಲ್ಲಿ ವಾಕ್‌ಶುದ್ಧಿ, ವಸನ ಶುದ್ಧಿ, ಚಿತ್ತಶುದ್ಧಿ, ದೇಹಶುದ್ಧಿ, ಆತ್ಮಶುದ್ಧಿಯನ್ನಲ್ಲದೇ ವಾತಾವರಣ ಶುದ್ಧಿಯನ್ನು ಮಾಡುತ್ತದೆ.

*

**ಸೋಮೇಶ್ವರ ಶತಕ**

*ಮೃಡ ತಾಂ ಭಿಕ್ಷವಬೇಡನೇ ಮುಖಿಜೆ ತಾಂ ತೊಳ್ತಾಗಳೇ*
*ಪಾಂಡವರ್ ।*
*ಪಿಡಿದೋಡಂ ತಿರಿದುಣ್ಣರೇ ಖಳನ ಕೈಯೊಳ್*
*ಸಿಕ್ಕಳೇ ಸೀತೆ ತಾಂ ॥*
*ಸುಡುಗಾಡಿಕ್ಕೆಗೆ ಭಂಟನಾಗನೆ ಹರಿಶ್ಚಂದ್ರಂ ನರರ್*
*ಪೂರ್ವದೊಳ್ ।*
*ಪಡೆದಷ್ಟುಣ್ಣದೆ ಪೋಪರೇ*
*ಹರಹರಾ ಶ್ರೀ ಚೆನ್ನಸೋಮೇಶ್ವರಾ ॥*

ಶಿವನು ಭಿಕ್ಷೆ ಬೇಡಲಿಲ್ಲವೇ ? ದ್ರೌಪದಿಯು ವಿರಾಟ ನಗರದಲ್ಲಿ ದಾಸಿಯಾಗಿರಲಿಲ್ಲವೇ? ಪಾಂಡವರು ಮಡಕೆಯನ್ನು ಹಿಡಿದು ಕೊಂಡು ತಿರಿದು ತಿಂದು ಜೀವನ ಮಾಡಲಿಲ್ಲವೇ? ಸೀತೆಯು ರಾವಣನಿಗೆ ಸೆರೆ ಸಿಕ್ಕಲಿಲ್ಲವೆ? ಹರಿಶ್ಚಂದ್ರನು ಸ್ಮಶಾನದ ಕಾವಲುಗಾರನಾಗಲಿಲ್ಲವೆ? ಆದ ಕಾರಣ ಮನುಷ್ಯರು ಪೂರ್ವಜನ್ಮದಲ್ಲಿ ಮಾಡಿದ ಕರ್ಮಕ್ಕೆ ತಕ್ಕ ಫಲವನ್ನನುಭವಿಸಿಯೇ ತೀರಬೇಕು.





# ಸಾರ್ಥಕತೆಯ ಸತ್ಪಥದಲ್ಲಿ ನಮ್ಮ ಸ್ವಾತಂತ್ರ್ಯ ಸಾಗಲಿ

-ಯೋಗೀಶ್ ನಿರ್ವಿಕಲ್ಪ *

ನಮ್ಮ ಸ್ವಾತಂತ್ರ್ಯಪೂರ್ವ ರಾಷ್ಟ್ರೀಯ ಚಳುವಳಿಗಳಲ್ಲಿ ಜಲಿಯಾನ್‌ವಾಲಾಬಾಗ್ ದುರಂತ ಅತ್ಯಂತ ಪ್ರಮುಖವಾದುದು. ಇಂದಿಗೂ ಈ ದುರಂತ ನೆನಪು ಪ್ರತಿಯೊಬ್ಬ ಭಾರತೀಯನ ತನುಮನಗಳಲ್ಲಿ ದೇಶಾಭಿಮಾನದ ರೋಮಾಂಚನದ ಮಿಂಚು ಹರಿಸುತ್ತದೆ. ಅಂದು ಬ್ರಿಟೀಷ್ ದುರಾಡಳಿತ ಹಾಗೂ ಯುದ್ಧಕಾಲದ ಲಷ್ಕರಿ ಕಾನೂನುಗಳನ್ನು ಬೆಂಬಲಿಸುವಂತಹ ರೌಲಟ್ ಕಾಯಿದೆಯ ವಿರುದ್ಧ ದೇಶವ್ಯಾಪಿ ಚಳುವಳಿ ನಡೆಯುತ್ತಿತ್ತು. ಪಂಜಾಬಿನಲ್ಲಿಯೂ ಅಂತಹ ಮಹತ್ವಪೂರ್ಣ ಚಳುವಳಿಗಳು ಪ್ರಾರಂಭಗೊಂಡಿದ್ದವು. ದೇಶಪ್ರೇಮಿಗಳಾದ ಡಾ॥ ಸೈಪುದ್ದೀನ್ ಕಿಚ್ಲೂ ಹಾಗೂ ಡಾ॥ ಸತ್ಯಪಾಲ್‌ರವರು ಈ ಕರಾಳ ಕಾಯಿದೆಯ ವಿರುದ್ಧ ಧ್ವನಿ ಎತ್ತಿ ಬಂಧಿಸಲ್ಪಟ್ಟಿದ್ದರು.

ಏಪ್ರಿಲ್ ೧೩, ೧೯೧೯ರಂದು ಅಮೃತಸರದ ಬಳಿಯಿರುವ ಜಲಿಯಾನ್ ವಾಲಾಬಾಗ್ ಎಂಬ ಪುಟ್ಟ ಕೈತೋಟದಲ್ಲಿಯೂ ಒಂದು ಪ್ರತಿಭಟನಾ ಸಭೆ ನಡೆದಿತ್ತು. ಸಾವಿರಾರು ದೇಶಾಭಿಮಾನಿಗಳು ಶ್ವೇತವಸ್ತ್ರಧಾರಿಗಳಾಗಿ ಈ ಸಭೆಯಲ್ಲಿ ಭಾಗವಹಿಸಿದ್ದರು. ಅವರೆಲ್ಲರ ಮಾತೃ ಭೂಮಿಯ ಭಕ್ತಿಯ ಕಂಪು ಮುಗಿಲು ಮುಟ್ಟಿತ್ತು. ನೋಡು ನೋಡುತ್ತಿದ್ದಂತೆಯೇ ಕೆಲವೇ ಕ್ಷಣಗಳಲ್ಲಿ ಯಾರೂ ಊಹಿಸಲಾಗದಂತಹ ಒಂದು ದುರ್ಘಟನೆ ನಡೆದು ಹೋಯಿತು. ಬ್ರಿಟಿಷ್ ಸೈನ್ಯಾಧಿಕಾರಿ ಬ್ರಿಗೇಡಿಯರ್ ಜನರಲ್ ರೆಜಿನಾಲ್ಡ್ ಇ.ಹೆಚ್. ಡಯರ್ ಯಾವುದೇ ಸೂಚನೆ ನೀಡದೇ ಹಾಗೂ ಮೈದಾನದ ಪ್ರವೇಶದ್ವಾರ ಗಳನ್ನು ಮುಚ್ಚಿಸಿ, ಈ ಸಭೆಯ ಜನರತ್ತ ಗುಂಡು ಹಾರಿಸುವ ಆಜ್ಞೆ ನೀಡಿದ್ದನು. ಇದರ ಫಲವಾಗಿ ಸಾವಿರಾರು ದೇಶಭಕ್ತರು ಸಾವು ಕಂಡರು. ಸಾವಿರಾರು ದೇಶಾಭಿಮಾನಿಗಳು ಜೀವನ್ಮರಣದ ನಡುವೆ ಒದ್ದಾಡಿದರು. ಸ್ವಾತಂತ್ರ್ಯಯೋಧರ ಸ್ವಾತಂತ್ರ್ಯಾಭಿಮಾನದ ನೆತ್ತರಿನ ಹೊಳೆ ಹರಿಯಿತು. ವಂದೇ ಮಾತರಂ ಎಂಬ ದೇಶಭಕ್ತಿಯ ಮಂತ್ರ ನಾಲ್ಕು ದಿಕ್ಕುಗಳಲ್ಲಿಯೂ ಪ್ರತಿಧ್ವನಿಸಿತು. ಈ ದುಃಖಮಯ ದುರಂತ ಡಯರ್‌ನ ಪೈಶಾಚಿಕ ಮನೋಸ್ಥಿತಿಗೊಂದು ಸಾಕ್ಷಿ.

ಈ ಅಮಾನವೀಯ ಕೃತ್ಯ ಕುರಿತು ವಿಚಾರಣೆ ನಡೆಸಿದ ಹಂಟರ್ ಆಯೋಗ ನೀಡಿದ ವರದಿಯ ಪ್ರಕಾರ ಅಂದು ೧೬೫೦ ಗುಂಡು ಹಾರಿಸಲಾಗಿತ್ತು. ೧೫೧೬ ದೇಶಭಕ್ತರು ಸಾವು ಕಂಡಿದ್ದರು. ಸುಮಾರು ೨೦,೦೦೦ ದೇಶಾಭಿಮಾನಿಗಳು ಈ ಸಭೆಯಲ್ಲಿದ್ದರು. ಈ ನೀಚಕೃತ್ಯ ಎಸಗಿದ ಡಯರ್‌ನನ್ನು ಬ್ರಿಟೀಷ್ ಸರ್ಕಾರ ನಿರಪರಾಧಿ ಎಂದು ತೀರ್ಮಾನಿಸಿತು. ಇಂಗ್ಲೆಂಡ್ ಆತನನ್ನು ಅಭಿಮಾನಪೂರ್ವಕವಾಗಿ ಸ್ವಾಗತಿಸಿ ಸತ್ಕರಿಸಿತು. ಈ ದುರಂತ ನಡೆದು ಸುಮಾರು ೨೧ ವರ್ಷಗಳ ನಂತರ ಇಂಗ್ಲೆಂಡ್‌ನಲ್ಲಿದ್ದ ಡಯರ್‌ನನ್ನು ೧೬ ವರ್ಷದ ಬಾಲಕ ಉದಾಂಸಿಂಗ್ ಗುಂಡಿಟ್ಟು ಕೊಂದನು. ಈ ಎಲ್ಲಾ ಸಂಗತಿಗಳು ಒಂದು ಕ್ಷಣ ನಮ್ಮ ಚಿತ್ತ ಪರದೆಯ ಮೇಲೆ ಹಾದು ಹೋದಂತೆ. ಈ ಎಲ್ಲಾ ಸಂಗತಿಗಳು ಇಂದು ಇತಿಹಾಸದ ಕಾಲಗರ್ಭದಲ್ಲಿ ಅಡಗಿ ಹೋಗಿದೆ.

### ಸ್ವಾತಂತ್ರ್ಯ ಸದ್ಗುಣಗಳ ವಿಕಸನ

ನಾವಿಂದು ಪಡೆದಿರುವ ಸ್ವಾತಂತ್ರ್ಯದಲ್ಲಿ ಸಾವಿರಾರು ದೇಶಪ್ರೇಮಿಗಳ ತ್ಯಾಗ ಬಲಿದಾನಗಳಿವೆ. ಸಾವಿರಾರು ವೀರ ಮಾತೆಯರ ಸ್ವಾತಂತ್ರ್ಯಾಭಿಮಾನದ ನೋವಿನ ಕಣ್ಣೀರ ಕಥೆ ಇದೆ. ನಾವು ಪಡೆದ ಸ್ವಾತಂತ್ರ್ಯದಲ್ಲಿ ಸಾವಿರಾರು ಅಮರ ದೇಶಭಕ್ತರ ಆಶೋತ್ತರಗಳು ಅಡಗಿವೆ. ಈ ಸತ್ಯವನ್ನು ಜಲಿಯನ್‌ವಾಲಾಬಾಗ್ ನಂತರ ದುರಂತ ಸಂಗತಿಗಳು ನಮಗೆ ಸದಾ ನೆನಪು ಮಾಡಿಕೊಡುತ್ತವೆ. ಸ್ವಾತಂತ್ರ್ಯಾಭಿಮಾನದ ಇಂತಹ ನೂರಾರು ಸಂಗತಿಗಳನ್ನು ನಾವು ನೆನಪು ಮಾಡಿಕೊಳ್ಳುವುದರ ಮೂಲಕ ಸ್ವಾತಂತ್ರ್ಯದ ಅರ್ಥವನ್ನು ಗ್ರಹಿಸುವ ಪ್ರಾಮಾಣಿಕ ಪ್ರಯತ್ನ ಮಾಡಬೇಕು. ಸ್ವಾತಂತ್ರ್ಯ ದಿನಾಚರಣೆ ಕೇವಲ ಔಪಚಾರಿಕವಾಗಿರದೆ ಅದರ ದಿವ್ಯ ಉದ್ದೇಶದತ್ತ ನಮ್ಮ ಚಿತ್ತ ಸಾಗಬೇಕು. ಸ್ವಾತಂತ್ರ್ಯದ ಸಾರ್ಥಕತೆಯ ದಿಕ್ಕಿನತ್ತ ಬೆಳಕು ಹರಿಸುವ ಕಾರ್ಯ ನಡೆಯಬೇಕು. ನಾವು ಪಡೆದಿರುವ ಸ್ವಾತಂತ್ರ್ಯ ಸಾರ್ಥಕತೆಯ ಸತ್ಪಥದಲ್ಲಿ ಸಾಗಿದಾಗ ಮಾತ್ರ ನಾವು ಪಡೆದಿರುವ ಸ್ವಾತಂತ್ರ್ಯಕ್ಕೊಂದು ಸುಂದರ ಅರ್ಥ ಮೂಡಲು ಸಾಧ್ಯ.

ನಾವಿಂದು ಸ್ವಾತಂತ್ರ್ಯ ಹೊಂದಿ ಸುಮಾರು ೬೩ ವರ್ಷಗಳನ್ನು ಕಳೆದಿದ್ದರೂ ನಾವು ಸಾಧಿಸಬೇಕಾದ ಅತ್ಯಂತ ಮಹೋನ್ನತ ಕಾರ್ಯಗಳನ್ನು ಸಾಧಿಸುವಲ್ಲಿ ವಿಫಲ ಯನ್ನು

* ಕುಚಲಕ್ಕಿ ಕೇರಿ, ಬಿ.ಹೆಚ್. ರಸ್ತೆ, ಶಿವಮೊಗ್ಗ- ೫೭೭ ೨೦೧.

ರಾಗಿದ್ದೇವೆ. ಇಂದು ನಮ್ಮ ಸ್ವಾತಂತ್ರ್ಯದ ಸಾರ್ವಭೌಮತ್ವ ಹಾಗೂ ಅರ್ಥವನ್ನು ಸಂಕುಚಿತಗೊಳಿಸುವ ಕಾರ್ಯ ಒಂದೆಡೆ ಸಾಗಿದೆ. ಸ್ವಾತಂತ್ರ್ಯ ಕೆಲವು ವ್ಯಕ್ತಿಗಳಲ್ಲಿ ಕೇಂದ್ರೀಕೃತಗೊಳ್ಳುತ್ತಿದೆಯೇನೋ ಎಂದೆನಿಸುತ್ತಿದೆ. ಸ್ವಾತಂತ್ರ್ಯ ಕುರಿತು ಒಬ್ಬ ಜನಪದ ಕವಿ ವ್ಯಕ್ತಪಡಿಸುವ ಈ ಅಭಿಪ್ರಾಯ ಕಂಡಾಗ ಅದು ವಾಸ್ತವಿಕ ಸತ್ಯಕ್ಕೆ ಅತ್ಯಂತ ಸನಿಹ ಎನ್ನುವುದರಲ್ಲಿ ಸಂಶಯವಿಲ್ಲ.

*ಬಂದಿದೆ ಬಂದಿದೆ ಸ್ವಾತಂತ್ರ್ಯ*
*ರಾಜಕಾರಣಿಗಳ ಕೈಗೆ ಬಂದಿದೆ*
*ನಮ್ಮ ಸ್ವಾತಂತ್ರ್ಯ !*
*ಸಿಕ್ಕಿದೆ ಸಿಕ್ಕಿದೆ ಸ್ವಾತಂತ್ರ್ಯ*
*ಧನವಂತರ ಕೈಗೆ ಸಿಕ್ಕಿದೆ*
*ನಮ್ಮ ಸ್ವಾತಂತ್ರ್ಯ*
*ಹೋಗಿದೆ ಹೋಗಿದೆ ಸ್ವಾತಂತ್ರ್ಯ*
*ಬಡವರ ಕೈಗೆ ಸಿಗದೆ ಹೋಗಿದೆ*
*ನಮ್ಮ ಸ್ವಾತಂತ್ರ್ಯ !*

ಸ್ವಾತಂತ್ರ್ಯದ ಸ್ವಾರ್ಥಪರ ಬಳಕೆ ನಮ್ಮ ಪ್ರಜಾತಂತ್ರ ವ್ಯವಸ್ಥೆ ಹಾಗೂ ರಾಷ್ಟ್ರ ಪ್ರಗತಿಯ ಮೇಲೆ ದುಷ್ಪರಿಣಾಮ ಬೀರುವಂತಹದ್ದು. ಇದು ರಾಷ್ಟ್ರದ ಅರಾಜಕತೆಗೂ ಕಾರಣವಾಗಬಹುದು. ನಾವು ಪಡೆದ ಸ್ವಾತಂತ್ರ್ಯ ನಮ್ಮ ಸ್ವೇಚ್ಛಾಚಾರ –ಸ್ವಾರ್ಥ–ಅಕ್ರಮ ಸಂಪತ್ತಿನ ಗಳಿಕೆ–ಸ್ವಜನ ಪಕ್ಷಪಾತ – ರಾಜಕೀಯ ಹಿತಾಸಕ್ತಿ –ಅಹಂ–ಮುಂತಾದುವುಗಳ ವಿಷಯದ ಜಾಗೃತಿ ಕಾರಣವಾಗಬಾರದು. ನಮ್ಮ ಸನಾತನ ಸಂಸ್ಕೃತಿ, ಸತ್ಯ, ಅಹಿಂಸೆ, ಪ್ರಾಮಾಣಿಕತೆಗಳಂತಹ ಸದ್ಗುಣಗಳ ವಿಕಸನಕ್ಕೆ ನಾವು ಪಡೆದ ಸ್ವಾತಂತ್ರ್ಯ ಸಕಾರಣವಾಗಬೇಕು. ನಮ್ಮ ದೇಶಭಕ್ತರ ಹಾಗೂ ಮಹಾತ್ಮರ ದಿವ್ಯ ಆಶೋತ್ತರಗಳಿಗೆ ಚ್ಯುತಿ ಬಾರದಂತೆ ನಮ್ಮ ಸ್ವಾತಂತ್ರ್ಯದ ಸದ್ಬಳಕೆ ಆಗಬೇಕಿರುವುದು ಅತ್ಯಂತ ಆವಶ್ಯಕ.

**ನಾವೆಲ್ಲರೂ ಭಾರತೀಯರು**

ನಾವೆಲ್ಲರೂ ಭಾರತೀಯರೆಂದೂ ಅಭಿಮಾನಪೂರ್ವಕವಾಗಿ ಹೇಳಿಕೊಳ್ಳುವ ನಮ್ಮೊಳಗೆ ಏಕತೆ ಸಾಧ್ಯವಾಗದೆ ಇರುವುದೊಂದು ವಿಪರ್ಯಾಸ. ಪ್ರತಿಯೊಂದು ರಾಜ್ಯ ರಾಜ್ಯಗಳ ನಡುವಿನ ಭಿನ್ನಾಭಿಪ್ರಾಯಗಳು ಕಗ್ಗಂಟಾಗಿ ಬೆಳೆಯುತ್ತಲೇ ಸಾಗಿದೆ. ಭಾಷೆ ಸಮಸ್ಯೆ– ಜಲವಿವಾದ – ಗಡಿ ಸಮಸ್ಯೆ– ನಕ್ಸಲ್ ಸಮಸ್ಯೆ–ಭಯೋತ್ಪಾದನೆ... ಮುಂತಾದವುಗಳಿಗೆ ಶಾಶ್ವತ ಪರಿಹಾರ ಕಂಡುಕೊಳ್ಳಲು ಸಾಧ್ಯವಾಗುತ್ತಿಲ್ಲ. ಸಮನ್ವಯ ಭಾವದಿಂದ ಬಗೆಹರಿಸಿಕೊಳ್ಳಬಹುದಾದ ಕೆಲವೊಂದು ಸಮಸ್ಯೆಗಳನ್ನು ಬಗೆಹರಿಸಿ ಕೊಳ್ಳಲು ಸಾಧ್ಯವಾಗುತ್ತಿಲ್ಲ. ಅತೀ ಸಣ್ಣ ಸಣ್ಣ ವಿಚಾರಗಳಾಗಲಿ ನ್ಯಾಯಾಲಯಗಳ ಮೊರೆ ಹೋಗುವುದರ ಮೂಲಕ ನಾವೆಲ್ಲರೂ ಭಾರತೀಯರೆಂಬ ಬರೀ ಉಪಚಾರದ ಮಾತುಗಳನ್ನಾಡದೆ ದೇಶದ ಸಾರ್ವ ಭೌಮತ್ವಕ್ಕಾಗಿ ಶ್ರಮಿಸುವ ದೃಢಸಂಕಲ್ಪ ನಾವಿಂದು ಕೈಗೊಳ್ಳಬೇಕು. ರಾಷ್ಟ್ರೀಯ ಜಲ ನೀತಿಯನ್ನು ರೂಪಿಸಿಕೊಳ್ಳುವುದರ ಮೂಲಕ ರಾಜ್ಯ ರಾಜ್ಯಗಳ ನಡುವಿನ ಜಲವಿವಾದಗಳಿಗೆ ಶಾಶ್ವತ ಪರಿಹಾರ ಕಂಡುಕೊಳ್ಳಲು ಪ್ರಯತ್ನ ಮಾಡಬೇಕು. ಜನಪರ ಕಾಳಜಿ ವಹಿಸಿ ಸರ್ಕಾರ ಕಾರ್ಯ ಮಾಡುವುದರ ಮೂಲಕ ನಕ್ಸಲ್ ಚಳುವಳಿಗೆ ಶಾಶ್ವತ ಪರಿಹಾರ ಕಂಡುಕೊಳ್ಳಬಹುದು. ಕಾಶ್ಮೀರದ ಸಮಸ್ಯೆಗೆ ದೃಢಮನಸ್ಸಿನ ದ್ವಿಪಕ್ಷೀಯ ಮಾತುಕತೆ ಅತ್ಯಂತ ಆವಶ್ಯಕ. ವಿಶ್ವಸಂಸ್ಥೆಯ ಸಹಕಾರದೊಂದಿಗೆ ಸರ್ಕಾರ ಕಾಶ್ಮೀರ ಸಮಸ್ಯೆಯ ಪರಿಹಾರಕ್ಕೆ ದಿಟ್ಟಹೆಜ್ಜೆಯ ಪ್ರಯತ್ನ ಮಾಡಬೇಕು.

ದೇಶಾದ್ಯಂತ ಇಂದು ಭ್ರಷ್ಟಾಚಾರ–ಮೋಸ–ಅಪ್ರಮಾಣಿಕತೆ ಮತ್ತು ಅನೈತಿಕತೆಗಳು ವ್ಯಾಪಕವಾಗಿ ಹರಡುತ್ತಿವೆ. ದೇಶಭಕ್ತರು ಕಾಣಬಯಸಿದ ಸ್ವಾತಂತ್ರ್ಯೋತ್ತರ ಕನಸು ಕನಸಾಗೇ ಉಳಿದಿದೆ. ಸ್ವಾತಂತ್ರ್ಯ ಯೋಧರ ಕನಸನ್ನು ನನಸಾಗಿಸಲು ನಾವಿಂದು ಮುಂದಾಗಬೇಕು. ಅನೈತಿಕತೆಗಳನ್ನೇ ಕಣ್ಮುಚ್ಚಿ ಪೂಜಿಸುವ ವ್ಯವಧಾನದಿಂದ ನಾವಿಂದು ಹೊರಬರಬೇಕಿರುವುದು ಅತ್ಯಂತ ಅನಿವಾರ್ಯ. ಅನ್ಯಾಯ ಮತ್ತು ಅಕ್ರಮಗಳ ವಿರುದ್ಧ ಅಹಿಂಸಾತ್ಮಕವಾಗಿ ಪ್ರತಿಭಟಿಸುವ ಮನೋಭಾವವನ್ನು ನಾವಿಂದು ಬೆಳೆಸಿಕೊಳ್ಳಬೇಕು. ಯಾವುದೇ ಕಾರಣಕ್ಕೂ ಹೋರಾಟದ ಮನೋಭಾವದಿಂದ ಹಿಂದೆ ಸರಿಯ ಬಾರದು. ನಮ್ಮ ಹೋರಾಟ ಮತ್ತು ಪ್ರತಿಭಟನೆಗಳು ಸದಾ ಅಹಿಂಸಾತ್ಮಕ ಸ್ವರೂಪದಲ್ಲಿರುವ ಸದಾ ಅಹಿಂಸಾತ್ಮಕ ಸ್ವರೂಪದಲ್ಲಿರುವಂತೆ ಎಚ್ಚರಿಕೆ ವಹಿಸಬೇಕು. ಸಾರ್ವಜನಿಕ ಆಸ್ತಿ–ಪಾಸ್ತಿಗಳನ್ನು ಸಂರಕ್ಷಿಸುವುದು ನಮ್ಮ ಕರ್ತವ್ಯವೆಂಬುದನ್ನು ಮರೆಯಬಾರದು. ನಾವಿಂದು ಗಣಿಗಾರಿಕೆಯ ಮೂಲಕ ನಮ್ಮ ಪ್ರಾಕೃತಿಕ ಅರಣ್ಯಸಂಪತ್ತನ್ನು ಕಳೆದುಕೊಳ್ಳು ತ್ತಿದ್ದೇವೆ. ಪ್ರಕೃತಿ ಮಾತೆಯ ಒಡಲನ್ನು ಬಗೆದು ಮಾರಿ ಕೊಳ್ಳುವಂತಹ ಹೀನಾಯ ದರಿದ್ರ್ಯತೆ ನಮಗೇಕೆ? ಎಂದು ಪ್ರತಿಯೊಬ್ಬ ಭಾರತೀಯನು ಪ್ರಶ್ನಿಸಿಕೊಳ್ಳುವುದರ ಮೂಲಕ ನಮ್ಮ ಪ್ರಾಕೃತಿಕ ಅರಣ್ಯ ಸಂಪತ್ತನ್ನು ಕಾಪಾಡುವ ಮಹತ್ಕಾರ್ಯಕ್ಕೆ ನಾವು ಮುಂದಾಗಬೇಕು. ಹತ್ತು ಹಲವಾರು ವಿವಾದ ಹಾಗೂ ಸಂಶಯಗಳಿಗೆ ಅವಕಾಶ ಮಾಡಿ ಕೊಟ್ಟಿರುವ ಗಣಿಗಾರಿಕೆ





ಕೇಂದ್ರ ಸರ್ಕಾರ ಪೂರ್ಣ ರಾಷ್ಟ್ರೀಕರಣಗೊಳಿಸಬೇಕು. ವಿದೇಶಗಳಿಗೆ ಅದಿರು ರಫ್ತು ಮಾಡುವುದನ್ನು ಸಂಪೂರ್ಣವಾಗಿ ನಿಷೇದಿಸಬೇಕು. ನಮ್ಮ ಪ್ರಾಕೃತಿಕ ಅರಣ್ಯ ಸಂಪತ್ತನ್ನು ಬಲಿಕೊಟ್ಟು ಕೈಗೊಳ್ಳುವಂತಹ ಯಾವುದೇ ಯೋಜನೆಗಳನ್ನು ಸಹ ಸರ್ಕಾರ ಕೈಗೊಳ್ಳಬಾರದು. ಶುದ್ಧ ಗಾಳಿ, ನೀರು ಹಾಗೂ ಪರಿಸರವನ್ನು ಸದಾ ಉಳಿಸಿ ಬೆಳೆಸುವಂತಹ ಮುಖ್ಯ ಕಾರ್ಯದ ಗುರಿ ನಮ್ಮ ಸರ್ಕಾರದ್ದಾಗಬೇಕು.

**ವ್ಯವಸ್ಥಿತ ಕೃಷಿನೀತಿ ನಮ್ಮದಾಗಲಿ !**

ಪ್ರತಿಯೊಂದು ಕಾರ್ಯಯೋಜನೆಗಳಿಗೂ ವಿದೇಶದಿಂದ ಸಾಲ ತರುವ ಕೆಟ್ಟ ಸಂಪ್ರದಾಯಕ್ಕೆ ರಾಷ್ಟ್ರ ಇತಿಶ್ರೀ ಹಾಡುವುದು ಅತ್ಯಂತ ಅಗತ್ಯವಾದುದು. ಎಸ್‌ಇಝಡ್‌ನಂತಹ ಅರ್ಥರಹಿತ ಯೋಜನೆಗಳನ್ನು ಸರ್ಕಾರ ಸಂಪೂರ್ಣವಾಗಿ ಕೈಬಿಡಬೇಕು. ಬೃಹತ್ ಉದ್ದಿಮೆ ಗಳಿಗಾಗಿ ಫಲವತ್ತಾದ ಕೃಷಿಭೂಮಿಯನ್ನು ರೈತ ಸಮು ದಾಯದಿಂದ ಕಬಳಿಸುವ ಸರ್ಕಾರದ ನೀತಿ ಬದಲಾಗ ಬೇಕು. ನಮ್ಮ ದೇಶ ಕೃಷಿ ಅಧಾರಿತ ರಾಷ್ಟ್ರ ಎಂಬುದನ್ನು ನಮ್ಮ ರಾಜಕೀಯ ನೇತಾರರು ಎಂದೂ ಮರೆಯಬಾರದು. ವ್ಯವಸ್ಥಿತ ಕೃಷಿ ನೀತಿಯ ಮೂಲಕ ಕೃಷಿ ಅವಲಂಬಿತ ಉದ್ಯೋಗಗಳನ್ನು ಸೃಷ್ಟಿಸಲು ಸರ್ಕಾರ ದಿಟ್ಟಹೆಜ್ಜೆ ಇಡಬೇಕು. ವಿಶ್ವಕ್ಕೆ ಅನ್ನದಾತ ರಾಷ್ಟ್ರವಾಗಿ ನಮ್ಮ ರಾಷ್ಟ್ರ ಕಂಗೊಳಿಸುವುದು ಅತ್ಯಂತ ಮುಖ್ಯ. ಈ ದಿಕ್ಕಿನಲ್ಲಿ ಸರ್ಕಾರ ಸೂಕ್ತ ನಿರ್ಣಯಗಳನ್ನು ಕೈಗೊಳ್ಳಬೇಕಿದೆ.

**ಏಕಸ್ವರೂಪದ ನಾಗರಿಕ ಕಾನೂನು ಜಾರಿಯಾಗಲಿ !:**

ರಾಷ್ಟ್ರವೊಂದರ ಜನ ಸಮುದಾಯ ಅಲ್ಲಿನ ನಿಜವಾದ ಸಂಪತ್ತು. ಜನರ ಪ್ರತಿಭೆ, ಸಾಮರ್ಥ್ಯ, ಚಾರಿತ್ರ್ಯಗಳ ಗುಣಮಟ್ಟದ ಆಧಾರದ ಮೇಲೆ ಆ ದೇಶದ ಸಂಪತ್ತನ್ನು ವಿಶ್ಲೇಷಣೆ ಮಾಡಲಾಗುವುದು. ಯಾವುದೇ ಅಂಕೆ ಇಲ್ಲದೆ ಬೆಳೆಯುತ್ತಿರುವ ನಮ್ಮ ರಾಷ್ಟ್ರದ ಜನಸಂಖ್ಯೆ ನಮ್ಮೆಲ್ಲಾ ಅಭಿವೃದ್ಧಿ ಕಾರ್ಯಗಳಿಗೂ ಅಡ್ಡಿವುಂಟುಮಾಡುತ್ತಿದೆ. ೧೯೪೭ರಲ್ಲಿ ೩೨.೯ ಕೋಟಿ ಇದ್ದ ರಾಷ್ಟ್ರದ ಜನಸಂಖ್ಯೆ ೧೯೫೧ರಲ್ಲಿ ೩೬.೧ ಕೋಟಿಗೆ ಏರಿತು. ೧೯೯೧–೨೦೦೧ರಲ್ಲಿ ೭೮.೫ ಕೋಟಿ ಮುಟ್ಟಿದ ಜನಸಂಖ್ಯೆ ಈಗಾಗಲೇ ಶತಕೋಟಿ ದಾಟಿದೆ. ಸರ್ಕಾರ ಈ ಕುರಿತು ಸೂಕ್ತಕ್ರಮಕೈಗೊಳ್ಳದೇ ಹೋದಲ್ಲಿ ಅದರ ದುಷ್ಪರಿಣಾಮದ ದಿನಗಳು ಬಹುದೂರವಿಲ್ಲ. ಜನಸಂಖ್ಯಾ ನಿಯಂತ್ರಣಕ್ಕೆ ಸರ್ಕಾರ ಏಕಸ್ವರೂಪದ ನಾಗರಿಕ ಕಾನೂನನ್ನು ಜಾರಿ ಮಾಡುವುದು ಅತ್ಯಂತ ಉತ್ತಮ ನಿರ್ಣಯವಾಗಬಹುದು. ಈ ವಿಚಾರವಾಗಿ ಪ್ರಾಜ್ಞರು ಒಮ್ಮತದ ಅಭಿಪ್ರಾಯಕ್ಕೆ ಬರುವುದು ರಾಷ್ಟ್ರದ ಪ್ರಗತಿ ಹಾಗೂ ಹಿತದೃಷ್ಟಿಯಿಂದ ಅತ್ಯಂತ ಅಗತ್ಯ.

**ನಮ್ಮ ಸಂಸ್ಕೃತಿ ಉಳಿಯಲಿ ! :**

ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವದಿಂದ ನಾವಿಂದು ನಮ್ಮ ಸಂಸ್ಕೃತಿ ಹಾಗೂ ಸಹಜತೆಗಳನ್ನು ಕಳೆದುಕೊಳ್ಳುತ್ತಿದ್ದೇವೆ. ಯುವಜನಾಂಗ ಪಾಶ್ಚಾತ್ಯ ಸಂಸ್ಕೃತಿಯತ್ತ ಆಕರ್ಷಿತರಾಗುತ್ತಿರುವುದೊಂದು ರಾಷ್ಟ್ರೀಯ ದುರಂತವೆನಿಸಿದೆ. ಇದು ಪರೋಕ್ಷವಾಗಿ ನಾವು ನಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡಂತೆ ಎನ್ನುವುದರಲ್ಲಿ ಸಂಶಯವಿಲ್ಲ. ನಮ್ಮ ಸನಾತನ ಸಂಸ್ಕೃತಿ ಆಧಾರಿತ ಸಚ್ಚಾರಿತ್ರ್ಯಪೂರ್ಣ ಸಮಾಜ ನಿರ್ಮಿಸುವ ಕಾರ್ಯಯೋಜನೆ ಸರ್ಕಾರದ ಅಭಿವೃದ್ಧಿಕಾರ್ಯಗಳಲ್ಲಿನ ಒಂದಂಶವಾಗಬೇಕು. ಅಭಿವೃದ್ಧಿ ಎಂದರೆ ಬರೀ ಜಡಕಟ್ಟಡಗಳ ನಿರ್ಮಾಣವಲ್ಲ. ಸತ್ಯ, ಅಹಿಂಸೆ ಹಾಗೂ ನೈತಿಕ ಮೌಲ್ಯಗಳಿಂದ ಕೂಡಿದ ಆದರ್ಶ ಸಮಾಜ ನಿರ್ಮಾಣವೆಂದರ್ಥ. ಅಂತಹ ಸಂಸ್ಕೃತಿ ಪೂರ್ಣ ಸಮಾಜ ನಿರ್ಮಾಣ ಕಾರ್ಯದಲ್ಲಿ ಸರ್ಕಾರ, ವಿಶ್ವವಿದ್ಯಾನಿಲಯಗಳು ಹಾಗೂ ಗುರುಹಿರಿಯರುಗಳ ಪಾತ್ರ ಅತ್ಯಂತ ಮಹತ್ವವೆನಿಸಿದೆ. ನಮ್ಮ ರಾಷ್ಟ್ರೀಯ ಶಿಕ್ಷಣ ನೀತಿ–ಆಡಳಿತ ವ್ಯವಸ್ಥೆ–ಆರೋಗ್ಯ ಪದ್ಧತಿಗಳು ಸಹ ಗಮನೀಯ ಬದಲಾವಣೆಗಳು ಕಾಣಬೇಕಿದೆ. ನಮ್ಮ ಸಂಸ್ಕೃತಿ ಮತ್ತು ನೈತಿಕ ಮೌಲ್ಯಗಳಿಗೆ ಮಹತ್ವ ಕೊಡುವ ಶಿಕ್ಷಣ ಇಂದು ನಮ್ಮ ರಾಷ್ಟ್ರಕ್ಕೆ ಅಗತ್ಯವಿದೆ. ಯುವಜನತೆ ರಾಷ್ಟ್ರಾಭಿಮಾನವನ್ನು ಬೆಳೆಸಿಕೊಳ್ಳುವುದರ ಮೂಲಕ ರಾಷ್ಟ್ರ ಸೇವೆಗೆ ತಮ್ಮ ಪ್ರತಿಭೆಯನ್ನು ಧಾರೆಯೆರೆಯುವ ಸಂಕಲ್ಪ ತೊಡಬೇಕು. ಸರ್ವರಿಗೂ ಶಿಕ್ಷಣ ನೀಡುವ ಅಭಿಯಾನ ಮತ್ತಷ್ಟು ಜಾಗೃತ ಕಾರ್ಯಗಳನ್ನು ರೂಪಿಸುವಲ್ಲಿ ಕ್ರಿಯಾಶೀಲವಾಗಬೇಕು. ಪ್ರತಿಯೊಂದು ಧರ್ಮಬಂಧುಗಳ ನಡುವೆ ಭಾವೈಕ್ಯತೆ–ಸಹಬಾಳ್ವೆ ಮತ್ತು ಸಮರಸ ಭಾವನೆಗಳು ಅರಳಬೇಕು. ನಾವೆಲ್ಲರೂ ಭಾರತೀಯರೆಂಬ ಭಾವ ಬೆಳೆಯಲು ಎಲ್ಲಾ ಧರ್ಮದ ಗುರುಗಳು ಪ್ರಾಮಾಣಿಕ ಪ್ರಯತ್ನ ಮಾಡಬೇಕು. ಜಾತ್ಯಾತೀತ ರಾಷ್ಟ್ರ ಕಲ್ಪನೆ ಹಸಿರಾಗಿರಲು ಇದು ಅತ್ಯಂತ ಅಗತ್ಯವಾದುದು.

**ಜನಪ್ರತಿನಿಧಿಗಳು ಸತ್ಯವಂತರಾಗಬೇಕು ! :**

ಸ್ವತಂತ್ರಗೊಂಡು ನಾವು ರೂಪಿಸಿಗೊಂಡ ಪ್ರಜಾತಂತ್ರ ವ್ಯವಸ್ಥೆಯಲ್ಲಿ ಸಾರ್ವತ್ರಿಕ ಚುನಾವಣೆಗಳು ಅತ್ಯಂತ ಪ್ರಮುಖ

ಪಾತ್ರ ವಹಿಸುತ್ತವೆ. ಇಂದು ಚುನಾವಣೆಗಳು ದಿಕ್ಕುತಪ್ಪುತ್ತಿವೆ. ಚುನಾವಣಾ ಸಂದರ್ಭದಲ್ಲಿ ನಡೆಯುವ ಪ್ರತಿಯೊಂದು ಅನ್ಯಾಯ, ಅಕ್ರಮಗಳ ವಿರುದ್ಧ ಕಠಿಣ ಕಾನೂನು ಜಾರಿ ಮಾಡುವುದು ಅತ್ಯಂತ ಅಗತ್ಯವಿದೆ. ಕಡ್ಡಾಯ ಮತದಾನದ ಮೂಲಕ ನಾವು ನಮ್ಮ ಪ್ರಜಾತಂತ್ರ ರಕ್ಷಣೆಯ ವ್ಯವಸ್ಥೆಗೆ ಭದ್ರಬುನಾದಿ ಹಾಕಬೇಕು. ಚುನಾವಣಾ ಪ್ರಕ್ರಿಯೆಯಲ್ಲಿ ಜನತೆ ಉತ್ಸಾಹದಿಂದ ಭಾಗವಹಿಸುವುದರ ಮೂಲಕ ಸತ್ಯವಂತರನ್ನು ನಮ್ಮ ಸದನಗಳಿಗೆ ಆರಿಸಿ ಕಳಿಸುವ ಗುರುತರ ಹೊಣೆಗಾರಿಕೆಯಿಂದ ನಾವು ತಪ್ಪಿಸಿಕೊಳ್ಳಬಾರದು. 'ಸತ್ಯವಂತರಾದಂತಹ ಜನಪ್ರತಿನಿಧಿ ಗಳು ನಮ್ಮ ಲೋಕಸಭೆ ಹಾಗೂ ವಿಧಾನಸಭೆಗಳಿಗೆ ಹೋದರೆ ಅವು ಸತ್ಯ ಮತ್ತು ಅಹಿಂಸೆಯ ಶೋಧನೆಯ ಕಮ್ಮಟಗಳಾಗಬಹುದು' ಎಂದು ಸದಾ ಜಪಿಸುತ್ತಿದ್ದವರು ಮಹಾತ್ಮ ಗಾಂಧೀಜಿ. ಆದರೆ ಇಂದು ನಮ್ಮ ಸದನಗಳು ಅಸತ್ಯ ಮತ್ತು ಹಿಂಸೆಯ ತಾಣಗಳಾಗಿ ಪರಿವರ್ತನೆಗೊಳ್ಳುತ್ತಿವೆ. ಇದು ನಿಜಕ್ಕೂ ಅತ್ಯಂತ ಆಘಾತಕಾರಿ ಸಂಗತಿ. ರಾಷ್ಟ್ರದ ಜನತೆ ಸುಶಿಕ್ಷಣ ಪಡೆಯುವುದರ ಮೂಲಕ ಜಾಗೃತರಾಗಬೇಕು. ನಮ್ಮ ಸದನಗಳಿಗೆ ಸತ್ಯವಂತರನ್ನು ಆರಿಸಿ ಕಳಿಸಬೇಕು. ಅದೊಂದು ರಾಷ್ಟ್ರಸೇವೆ ಎಂಬುದನ್ನು ಮರೆಯಬಾರದು. ನಮ್ಮ ಎಲ್ಲಾ ಸದನಗಳು ಸತ್ಯವಂತರಿಂದ ಕಂಗೊಳಿಸಿದಾಗ ಮಾತ್ರ ನಾವು ಶ್ರಮಪಟ್ಟು ಪಡೆದ ನಮ್ಮ ಸ್ವಾತಂತ್ರ್ಯದ ಸಾರ್ಥಕತೆ ಕಾಣಲು ಸಾಧ್ಯ. ಹಾಗೇ ನಾವು ರೂಪಿಸಿಕೊಂಡ ಪ್ರಜಾತಂತ್ರ ವ್ಯವಸ್ಥೆ ವಿರಾಜಮಾನ ವಾಗಿ ವಿಜೃಂಭಿಸಲು ಸಾಧ್ಯವಾಗುತ್ತದೆ.

**ರಾಷ್ಟ್ರದ ಸಾಧನೆ ಪ್ರಶಂಸನೀಯ ! :**

ರಾಷ್ಟ್ರದ ಹಲವಾರು ಸಮಸ್ಯೆ ಮತ್ತು ವೈರುಧ್ಯಗಳ ನಡುವೆಯೂ ರಾಷ್ಟ್ರ ಸಾಧಿಸಿರುವ ಸಾಧನೆಗಳು ನಿಜಕ್ಕೂ ಪ್ರಶಂಸನೀಯವೆಂಬುದರಲ್ಲಿ ಎರಡು ಮಾತಿಲ್ಲ. ನಮ್ಮ ರಾಷ್ಟ್ರ ವಿಜ್ಞಾನ ಮತ್ತು ತಾಂತ್ರಿಕತೆಯ ಕ್ಷೇತ್ರದಲ್ಲಿ ಸಾಕಷ್ಟು ಅಭಿವೃದ್ಧಿ ಸಾಧಿಸಿದೆ. ಕೃಷಿಯಲ್ಲಿ ಸ್ವಾವಲಂಬನೆ ಸಾಧಿಸುವ ದಿಕ್ಕಿನಲ್ಲಿ ಸಾಗಿದೆ. ಮಾಹಿತಿ ತಂತ್ರಜ್ಞಾನ ಹಾಗೂ ಬಯೋ ಟೆಕ್ನಾಲಜಿ ವಿಷಯಗಳಲ್ಲಂತೂ ವಿಶ್ವದ ಗಮನ ಸೆಳೆದಿದೆ. ಬಾಹ್ಯ ಶತ್ರುಗಳಿಂದ ಉಂಟಾಗಬಹುದಾದ ಅಪಾಯಕಾರಿ ಯುದ್ಧ ಸನ್ನಿವೇಶಗಳನ್ನು ತಪ್ಪಿಸಲು ನಮ್ಮ ಸೈನಿಕ ಶಕ್ತಿ ಅತ್ಯಂತ ಸಮರ್ಥವಾಗಿದೆ. ಆಧುನಿಕ ತಂತ್ರಜ್ಞಾನದ ಸ್ವದೇಶೀ ಯುದ್ಧ ಕ್ಷಿಪಣಿಗಳನ್ನು ತಯಾರಿಸುವುದರ ಮೂಲಕ ನಮ್ಮ ರಕ್ಷಣಾ ವ್ಯವಸ್ಥೆ ಬಲಿಷ್ಠಗೊಂಡಿದೆ. ಸ್ವದೇಶಿ ತಂತ್ರಜ್ಞಾನ ಬಳಸಿ ಚಂದ್ರಲೋಕಕ್ಕೂ ಉಪಗ್ರಹ ಕಳುಹಿಸಿ ವಿಶ್ವಮಟ್ಟ ದಲ್ಲಿ ಮನ್ನಣೆ ಪಡೆದಿರುವುದು ರಾಷ್ಟ್ರ ಹಿರಿಮೆಗೆ ಹಿಡಿದ ಕೈಗನ್ನಡಿಯಾಗಿದೆ. ಪರಮಾಣು ವಿಜ್ಞಾನವನ್ನು ದೇಶದ ಅಭಿವೃದ್ಧಿ ಮತ್ತು ಸುರಕ್ಷತೆಯ ದೃಷ್ಟಿಯಿಂದ ಬಳಸಿಕೊಂಡು ರಾಷ್ಟ್ರಪ್ರಗತಿ ಸಾಧಿಸುವ ದಿಕ್ಕಿನಲ್ಲಿ ಸಾಗಿರುವುದು ಜಗತ್ತಿಗೆ ಆದರ್ಶಪ್ರಾಯ ಎನ್ನಬಹುದು.

ಒಂದು ಆದರ್ಶಪೂರ್ಣ ಸದ್ಯಢ ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ ರಾಷ್ಟ್ರದ ಪ್ರತಿಯೊಬ್ಬ ಪ್ರಜೆಗೂ ಆತನದೇ ಆದ ಮುಖ್ಯ ಕರ್ತವ್ಯಗಳಿವೆ. ಅದನ್ನು ಪ್ರತಿಯೊಬ್ಬರೂ ನಿರ್ವಂಚನೆಯಿಂದ ನಿರ್ವಹಿಸಬೇಕು. ಆ ನಿರ್ವಂಚನೆಯ ಕಾರ್ಯವೇ ನಾವು ರಾಷ್ಟ್ರಕ್ಕೆ ಸಮರ್ಪಿಸುವ ನಿಜವಾದ ರಾಷ್ಟ್ರಸೇವೆಯಾಗುತ್ತದೆ. ಆಗ ಮಾತ್ರ ನಾವು ಶ್ರಮಪಟ್ಟು ಪಡೆದ ಸ್ವಾತಂತ್ರ್ಯಕ್ಕೊಂದು ನಿಜಾರ್ಥ ಮೂಡುತ್ತದೆ. ಹಾಗೇ ಸಾವಿರಾರು ದೇಶಪ್ರೇಮಿಗಳ ತ್ಯಾಗ, ಬಲಿದಾನಕ್ಕೊಂದು ನಾವು ಭಕ್ತಿಯ ನಮನ ಸಲ್ಲಿಸಿದಂತಾಗುತ್ತದೆ. ಸ್ವಾತಂತ್ರ್ಯೋತ್ಸವ ಈ ಸಂದರ್ಭದಲ್ಲಿ ಆ ದಿಕ್ಕಿನತ್ತ ಸಾಗುವ ದೃಢಸಂಕಲ್ಪ ನಮ್ಮದಾಗಲಿ.

*

### ಶ್ರೀವಾಣಿ

ಭರತಖಂಡಕ್ಕೆ ಸ್ವಾತಂತ್ರ್ಯ ಲಭಿಸಿ ಅನೇಕ ವರ್ಷಗಳು ಸಂದಿವೆ. ಕಷ್ಟಪಟ್ಟು ಸಂಪಾದಿಸಿದ ಸ್ವಾತಂತ್ರ್ಯದ ಪ್ರಯೋಜನವೇನು? ಎಂಬ ಪ್ರಶ್ನೆ ಅರ್ಥವಾಗಬೇಕಾದರೆ, ಸ್ವಾತಂತ್ರ್ಯ ಪೂರ್ವ ಇದ್ದ ಜೀವನ ವ್ಯವಸ್ಥೆಯನ್ನು ಅರ್ಥಮಾಡಿಕೊಂಡಾಗ ಮಾತ್ರ ಸಾಧ್ಯ. ಒಬ್ಬ ಆಂಗ್ಲ ವಿಚಾರವಾದಿ ಸ್ವಾತಂತ್ರ್ಯದ ಮೌಲ್ಯವನ್ನು ಕುರಿತು ಹೀಗೆ ವಿಚಾರಮಾಡಿದ್ದಾನೆ 'ಯಾವ ರಾಷ್ಟ್ರದಲ್ಲಿ ಸಂಪತ್ತು ಇದ್ದು ಎಲ್ಲಾ ರೀತಿಯ ಅನುಕೂಲಗಳಿದ್ದು ಸ್ವಾತಂತ್ರ್ಯವಿರುವುದಿಲ್ಲವೋ, ಆಗ ಅದು ಬಡ ರಾಷ್ಟ್ರವೆನಿಸುತ್ತದೆ. ಆದರೆ ಯಾವ ರಾಷ್ಟ್ರ ಸಂಪತ್ತಿಲ್ಲದೆ ಬಡತನದಿಂದ ಕೂಡಿದ್ದರೂ ಸ್ವಾತಂತ್ರ್ಯ ಪಡೆದುಕೊಂಡಿರುತ್ತದೆಯೋ ಅದು ಸಂಪದ್ಭರಿತ ರಾಷ್ಟ್ರವೆನಿಸುತ್ತದೆ'.

* * *





## ಸ್ವದೋಷ ದರ್ಶನ

–ಡಾ|| ಸಿ.ಪಿ. ಕೃಷ್ಣಕುಮಾರ್ *

**ಲೋ**ಕದಲ್ಲಿ ಯಾರೂ ಪರಿಪೂರ್ಣರಲ್ಲ; ನೂರಕ್ಕೆ ನೂರರಷ್ಟು ನಿರ್ದುಷ್ಟರಲ್ಲ. ಎಂತಹ ಮಹಾತ್ಮರಲ್ಲೂ ದೋಷ, ದೌರ್ಬಲ್ಯಗಳು ಕಿಂಚಿತ್ ಪ್ರಮಾಣದಲ್ಲಾದರೂ ಇರುತ್ತವೆ. ಸಾಮಾನ್ಯ ಮನುಷ್ಯರ ಮಾತಿರಲಿ, ಭಗವಂತನೆ ಮನುಷ್ಯರೂಪದಲ್ಲಿ ಅವತರಿಸಿದಾಗಲೂ ಮಾನವ ಸಹಜ ದೌರ್ಬಲ್ಯಗಳಿಂದ ಸಂಪೂರ್ಣ ಪಾರಾಗುವುದು ಸಾಧ್ಯವಿಲ್ಲವೆಂದು ತೋರುತ್ತದೆ.

ಶ್ರೀರಾಮನೊಬ್ಬ ಅವತಾರಪುರುಷ ತಾನೆ. ಅವನಿಗೆ ವಾಲ್ಮೀಕಿಗಳು ರಾಮಾಯಣದ ಆರಂಭದಲ್ಲಿ 'ಸ್ವದೋಷ ಪರದೋಷವಿತ್' (ತನ್ನ ಮತ್ತು ಪರರ ದೋಷಗಳನ್ನು ಬಲ್ಲವನು) ಎಂಬ ವಿಶೇಷಣಗಳನ್ನು ಹಚ್ಚಿರುವುದು ಅತ್ಯಂತ ಗಮನಾರ್ಹವಾಗಿದೆ. ರಾಮ ತನ್ನ ದೋಷಗಳನ್ನು ಬಲ್ಲವನಾಗಿದ್ದನಂತೆ ಎಂದರೆ, ಅವನಲ್ಲೂ ದೋಷಗಳಿದ್ದುವೆಂಬುದು ಸಿದ್ಧವಾಯಿತು. ಆದರೆ ಅವು ಬಹುಶಃ ಬೇರೆಯವರ ಅರಿವಿಗೆ ಬರದಷ್ಟು ಸಣ್ಣಪುಟ್ಟವಿರಬೇಕು.

'ಪರದೋಷವಿತ್' ಆಗುವುದೇನೂ ದೊಡ್ಡದಲ್ಲ. ಜಗತ್ತಿನಲ್ಲಿ ಬಹುಮಂದಿ ಇಂಥ 'ಜ್ಞಾನಿ'ಗಳೇ ! (ಇಲ್ಲದ ದೋಷಗಳನ್ನೂ ಕಾಣಬಲ್ಲ ದಿವ್ಯದೃಷ್ಟಿ ಕೆಲವರದು!) ಆದರೆ ಸ್ವದೋಷ ದರ್ಶನ ಮಹಾಪುರುಷರ ಲಕ್ಷಣ. ಅವರು ಸದಾ ಆತ್ಮಪರೀಕ್ಷೆಯಲ್ಲಿ ತೊಡಗಿರುತ್ತಾರೆ; ಇತರರಿಗೆ ಗೋಚರಿಸದಿರಬಹುದಾದ ದೌರ್ಬಲ್ಯಗಳನ್ನು ತಮ್ಮಲ್ಲಿ ಕಂಡುಕೊಳ್ಳುತ್ತಾರೆ. ಮಾತ್ರವಲ್ಲ, ಅವುಗಳ ನಿವಾರಣೆಗೆ ಸತತ ಪ್ರಯತ್ನಶೀಲರಾಗುತ್ತಾರೆ. ಅವರು ದೊಡ್ಡವರಾಗಿರುವುದಕ್ಕೆ ಇದೂ ಒಂದು ಕಾರಣವೆನ್ನಬೇಕು.

ಸಾಮಾನ್ಯರಲ್ಲಿ ಡೊಂಕುಗಳು ಬೇಕಾದಷ್ಟಿರುತ್ತವೆ; ಅವುಗಳ ಅರಿವೇ ಅವರಿಗಿರುವುದಿಲ್ಲ. ಇತರರ ಡೊಂಕುಗಳನ್ನು ಎಣಿಸುವುದರಲ್ಲಿ ಅವರು ಯಾವಾಗಲೂ ಆಸಕ್ತರು. ದೊಡ್ಡವರಲ್ಲೂ ಕೆಲವು ಕುಂದುಗಳಿರುತ್ತವೆ; ಅವಿಗಳ ಅರಿವು ಅವರಿಗಿದ್ದು, ಅವುಗಳನ್ನು ಹೋಗಲಾಡಿಸಿಕೊಳ್ಳುವುದರ ಕಡೆಗೆ ನಿಗಾ ವಹಿಸುತ್ತಾರೆ. ಇತರರ ಲೋಪದೋಷಗಳ ಅರಿವು ಅವರಿಗಿರುವುದಿಲ್ಲವೆಂದಲ್ಲ; ಆದರೆ ಗುಣಗಳಿಗೆ ಹೆಚ್ಚು ಲಕ್ಷ್ಯ ಕೊಡುತ್ತಾರೆ. (ಚಿಕಿತ್ಸೆ ಮಾಡಬೇಕಾದರೆ ವ್ಯಾಧಿಯ ತಿಳಿವೂ ಇರಲೇಬೇಕಲ್ಲವೆ?)

ಬಸವಣ್ಣನವರು ಮಹಾನುಭಾವರಾಗಿಯೂ 'ಎನ್ನ ಚಿತ್ತ ಅತ್ತಿಯ ಹಣ್ಣು ನೋಡಯ್ಯಾ' ಎಂದು ಗೋಗರೆದುದು ಇಂಥ 'ಪ್ರದೋಷವಿತ್' ಪ್ರವೃತ್ತಿಯಿಂದಲೇ; ಲೋಕ ಕೊಂಡಾಡಿದಾಗ 'ಎನ್ನವರೆನ್ನ ಹೊಗಳಿ ಹೊಗಳು ಹೊನ್ನ ಶೂಲದಲಿಕ್ಕಿದರು' ಎಂದು ಅವರು ನೊಂದುಕೊಳ್ಳುವುದು ಈ ಸ್ವದೌರ್ಬಲ್ಯಪ್ರಜ್ಞೆಯಿಂದಲೇ. ರಾಮನಾಗಲಿ ಬಸವನಾಗಲಿ ಮತ್ತಾವ ಮಹಾತ್ಮನೆ ಆಗಲಿ ಲೋಕದ ತಪ್ಪನ್ನು ತಿದ್ದುವ ಕೆಲಸಕ್ಕೆ ಕೈಹಾಕುವ ಮುನ್ನ ತಮ್ಮ ಸ್ವಂತ ತಪ್ಪುತಡೆಗಳನ್ನು ಪರಿಹರಿಸಿಕೊಳ್ಳಲು ಹೆಣಗಿದರು. ಆ ಹೋರಾಟದಿಂದಲೇ ಅವರು ನಮಗೆ ಮಾನವೀಯವಾಗಿ ಕಾಣತಕ್ಕದ್ದು; ಏಕಕಾಲಕ್ಕೆ ಆತ್ಮೀಯರೂ ಅನುಕರಣೀಯರೂ ಆಗಿರತಕ್ಕದ್ದು.

ವೈಯಕ್ತಿಕ ಮತ್ತು ಸಾಮಾಜಿಕ ಅವಗುಣಗಳನ್ನು ಅರಿತುಕೊಳ್ಳುವುದು, ಮೊದಲು ಸ್ವಂತ ಅವಗುಣಗಳನ್ನು ನೀಗಿಕೊಂಡು, ಆಮೇಲೆ ಸಮಾಜದ ಅವಗುಣಗಳ ವಿರುದ್ಧ ಹೋರಾಡುವುದು–ಇದು ದೊಡ್ಡವರ ದಾರಿ. ಸಾಧನೆಯಿಲ್ಲದೆ ಸಿದ್ಧಿಯಿಲ್ಲ. ಅವತಾರಗಳೂ ಒಂದರ್ಥದಲ್ಲಿ ಉದ್ಧಾರಗಳೇ.

*

* ನಿವೃತ್ತ ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು.



# ಕಾಯಕಯೋಗಿ ನುಲಿಯ ಚಂದಯ್ಯ

–ಎಚ್.ಎಸ್. ಸಿದ್ಧಗಂಗಪ್ಪ *



ನುಲಿಯ ಚಂದಯ್ಯ ಒಬ್ಬ ಮಹಾ ಶರಣ. ೧೨ನೇ ಶತಮಾನದಲ್ಲಿ ಬಸವಾದಿ ಶರಣರ ಸಮಕಾಲೀನ. ಕಾಯಕಕ್ಕೆ ಅರ್ಥಪೂರ್ಣವಾದ ವ್ಯಾಖ್ಯಾನ ಬರೆದ ವಚನಕಾರ, ಕಾಯಕ ಯೋಗಿ, ಹುಟ್ಟಿನಿಂದ ಹಗ್ಗ, ಕಣ್ಣಿ ಹೊಸೆದು ಮಾರುವುದು ಅವನ ದಿನನಿತ್ಯದ ಕಾಯಕ.

ಬಿಜಾಪುರದಿಂದ ೧೮ ಕಿ.ಮೀ. ದೂರ ದಲ್ಲಿರುವ ಶಿವಣಗಿ ಇವನು ಹುಟ್ಟಿದ ಊರು. ಮಡಿವಾಳ ಮಾಚಯ್ಯ ನುಲಿಯ ಚಂದಯ್ಯ ಸಮಾನ ವಯಸ್ಕರು. ಇವರಿಬ್ಬರು ಒಂದೇ ಕಡೆ ಕಾಯಕ ಮಾಡಿ ಜೀವಿಸುತ್ತಿದ್ದವರು. ಬಸವಣ್ಣ ನವರ ಪ್ರಭಾವವಲಯದಲ್ಲಿ ಸಿಕ್ಕಿ ಅವರ ದರ್ಶನ ಮಾಡಬೇಕೆಂಬ ಹಂಬಲ ದಿನಗಳೆದಂತೆ ತೀವ್ರವಾಗುತ್ತಿತ್ತು. ಅವರನ್ನು ಕಾಣುವ ಸುಯೋಗಕ್ಕೆ ಜಾತಕಪಕ್ಷಿಯಂತೆ ಕಾಯುತ್ತಿದ್ದರು.

ಶಿವಣಗಿಯಲ್ಲಿರುವ ಚಂದೇಶ್ವರಲಿಂಗ ನುಲಿಯ ಚಂದಯ್ಯನ ಆರಾಧ್ಯ ದೈವ. ಬಸವಣ್ಣನವರ ಆದರ್ಶ ವ್ಯಕ್ತಿತ್ವಕ್ಕೆ ಮಾರುಹೋದ ನುಲಿಯ ಚಂದಯ್ಯ ಕಲ್ಯಾಣಕ್ಕೆ ಹೋಗುತ್ತಾನೆ. ಅಲ್ಲಿ ತನ್ನ ಆಪ್ತ ಗೆಳೆಯ ಮಡಿವಾಳ ಮಾಚಯ್ಯನ ಭೇಟಿ ಆಗುತ್ತದೆ. ಗೆಳೆಯನನ್ನು ನೋಡಿ ಅತೀವ ಸಂತೋಷವಾಗುತ್ತದೆ. ಬಸವಾದಿ ಶರಣರು ಸಾರಿದ 'ಕಾಯಕವೇ ಕೈಲಾಸ' ದಿವ್ಯ ಮಂತ್ರ ನುಲಿಯ ಚಂದಯ್ಯನನ್ನು ಆಕರ್ಷಿಸುತ್ತದೆ. ಬಸವಣ್ಣನವರಿಗೆ ದೀನದಲಿತರ ಬಗ್ಗೆ ಇದ್ದ ಕಳಕಳಿ, ಸಮಾಜದಲ್ಲಿದ್ದ ಅಸಮಾನತೆಯ ವಿರುದ್ಧ ನಡೆಸುತ್ತಿದ್ದ ಹೋರಾಟ, ಪ್ರತಿಯೊಬ್ಬರೂ ಕಾಯಕ ಮಾಡಿ ಜೀವಿಸಬೇಕೆನ್ನುವ ಕಾಯಕ ಸಿದ್ದಾಂತ ಶರಣ ನುಲಿಯ ಚಂದಯ್ಯ ನಿಗೆ ಅಪ್ಯಾಯಮಾನವಾಗಿ ಕಂಡಿತು.

ನುಲಿಯ ಚಂದಯ್ಯನ ಕಾಯಕ ನಿಷ್ಠೆ, ಜಂಗಮಪ್ರೇಮ ಕಲ್ಯಾಣದಲ್ಲಿ ಮನೆಮಾತಾಗಿತ್ತು. ಅವನ ದೃಷ್ಟಿಯಲ್ಲಿ ಕಾಯಕವೆಂದರೆ

*ಗುರುವಾದರೂ ಕಾಯಕದಿಂದಲೇ ಜೀವನ್ಮುಕ್ತಿ*
*ಲಿಂಗವಾದಡೂ ಕಾಯಕದಿಂದಲೇ*
*ವೇಷದ ಪಾಶ ಹರಿಯುವುದು*
*ಜಂಗಮವಾದಡೂ ಕಾಯಕದಿಂದಲೇ ಚರಸೇವೆಯ ಮಾಡಬೇಕು*
*ಚೆನ್ನಬಸವಣ್ಣ ಪ್ರಿಯ ಚಂದೇಶ್ವರ ಲಿಂಗದ ಅರಿವು.*

ಕಾಯಕದಿಂದ ಯಾರಿಗೂ ವಿನಾಯಿತಿ ಇಲ್ಲ. ಗುರು ಜಂಗಮರಿರಲಿ, ಲಿಂಗಕ್ಕೂ ಇದರಿಂದ ವಿನಾಯಿತಿ ಇಲ್ಲ ಎಂಬುದು ನುಲಿಯ ಚಂದಯ್ಯನ ದೃಢವಾದ ನಿಲುವು. ಅವನು ಸತ್ಯಶುದ್ಧ ಕಾಯಕದ ಮಾಡುವಲ್ಲಿ ಗುರುಲಿಂಗ ಜಂಗಮರ ಹಂಗು ಹರಿದು ನಿಂತ ಶರಣ. ಕಾಯಕ ದಿಂದಲೇ ಜೀವನ್ಮುಕ್ತಿ ಎಂಬುದನ್ನು ಬದುಕಿ ತೋರಿದ ಧನ್ಯಜೀವಿ.

ಪ್ರಸ್ತುತ ಸಮಾಜಕ್ಕೆ ನುಲಿಯ ಚಂದಯ್ಯನ ಕಾಯಕ ತತ್ತ್ವದ ದಿವ್ಯ ಸಂದೇಶ ದಾರಿದೀಪ. ಪ್ರತಿಯೊಬ್ಬರೂ ತಮ್ಮ ತಮ್ಮ ಕಾಯಕದಲ್ಲಿ ನಿರತನಾದರೆ ಸೋಮಾರಿತನ

* 53/1, 'ಶಿವಕೃಪ', ಮೊದಲನೇ ಮುಖ್ಯರಸ್ತೆ, ಕಾವೇರಿ ಬಡಾವಣೆ, ನಾಗರಬಾವಿ ರಸ್ತೆ, ವಿಜಯನಗರ, ಬೆಂಗಳೂರು.





ವೆಂಬುದೇ ಇರದು. ದುಡಿಯುವ ಕೈಗಳು ಹೆಚ್ಚಾದಾಗ ಸಮಾಜದಲ್ಲಿ ತಾಂಡವವಾಡುತ್ತಿರುವ ಅಸಮಾನತೆ, ಬಡತನ, ದಾರಿದ್ರ್ಯ ದಿಂದ ಮುಕ್ತರಾಗಬಹುದು.

ನುಲಿಯ ಚಂದಯ್ಯನ ಕಾಯಕ ನಿಷ್ಠೆಗೆ ಒಂದು ನಿದರ್ಶನವನ್ನು ಕೊಡಬಹುದು. ಈತ ಒಂದು ದಿನ ಹುಲ್ಲು ಕೊಯ್ಯುವ ಕಾಯಕದಲ್ಲಿ ನಿರತನಾಗಿದ್ದಾಗ ಎದೆಯ ಮೇಲೆ ಧರಿಸಿದ್ದ ಇಷ್ಟಲಿಂಗ ಆಕಸ್ಮಿಕವಾಗಿ ನೀರೊಳಕ್ಕೆ ಬಿತ್ತು. ಏಕಾಗ್ರತೆಯಿಂದ ಕಾಯಕದಲ್ಲಿ ನಿರತನಾಗಿದ್ದುದರಿಂದ ಲಿಂಗ ನೀರಿಗೆ ಬಿದ್ದುದನ್ನು ಗಮನಿಸಲಿಲ್ಲ. ವಿಧಿಯಿಲ್ಲದೆ ಇಷ್ಟ ಲಿಂಗವೇ ಬಂದು ತನ್ನನ್ನು ಸ್ವೀಕರಿಸಬೇಕು ಎಂದು ವಿನಂತಿ ಮಾಡಿಕೊಂಡಿತು. ಮಡಿವಾಳ ಮಾಚಯ್ಯನವರು ಲಿಂಗದೇವನ ವಿನಂತಿಯನ್ನು ಗಮನಿಸಿ ಚಂದಯ್ಯನನ್ನು ಎಚ್ಚರಿಸಿದರೂ ಕೇಳಲಿಲ್ಲ. ಮಾಚಯ್ಯ ಇಷ್ಟಲಿಂಗವನ್ನು ಬಿಟ್ಟಿರಬಾರದೆದು ಹೇಳಿದಾಗ **'ಕಾಯಕ ಮಾಡುವುದಿದ್ದರೆ ಬರಲಿ'** ಎಂಬ ಷರತ್ತನ್ನು ಹಾಕುತ್ತಾನೆ. ಲಿಂಗದೇವ ಅದಕ್ಕೊಪ್ಪಿ ತಾನೊಂದು ಕಣ್ಣೆಹೊಸೆದು ಮಾರಲು ಹೋದಾಗ ಯಾರೂ ಕೊಳ್ಳದಿರಲು, ಬಸವಣ್ಣನವರ ಮನೆಗೆ ಹೋದನೆಂದೂ, ಬಸವಣ್ಣನವರಿತ್ತ ಸಾವಿರ ಹೊನ್ನುಗಳನ್ನು ತಂದೀಯಲು **'ಇದು ಆಸೆಯಿಂದ ಬಂದ ಹೊನ್ನು ಕಾಯಕಕ್ಕೆ ಸಲ್ಲ'** ವೆಂದು ಚಂದಯ್ಯ ಒಂದು ಹಾಗವನ್ನು ಮಾತ್ರ ಉಳಿಸಿಕೊಂಡು ಉಳಿದುದನ್ನು ಬಸವಣ್ಣನವರಿಗೆ ಹಿಂದಿರುಗಿಸಿದನೆಂದು' ಪುರಾಣಗಳಿಂದ ತಿಳಿದು ಬರುತ್ತದೆ.

ಶ್ರಮಕ್ಕೆ ತಕ್ಕ ಬೆಲೆ ಎಂಬ ಚಂದಯ್ಯನ ನಿಲುವು ಮೆಚ್ಚುವಂತಹುದು. ಶ್ರಮಕ್ಕಿಂತ ಹೆಚ್ಚು ಸಂಪಾದನೆ ಅವನಿಗೆ ವಿಷವಾಗಿ ಕಂಡಿದೆ. ಅವನ ಆದರ್ಶನವನ್ನು ಎಲ್ಲರೂ ಅನುಷ್ಠಾನಕ್ಕೆ ತಂದರೆ ಸಮಾಜದಲ್ಲಿಂದು ತಾಂಡವವಾಡು ತ್ತಿರುವ ಭ್ರಷ್ಟಾಚಾರಕ್ಕೆ ಕಡಿವಾಣ ಹಾಕಬಹುದು. ಅತಿ ಆಸೆ, ಅಗತ್ಯಕ್ಕಿಂತಲೂ ಹೆಚ್ಚಾಗಿ ಸಂಗ್ರಹಿಸುವುದನ್ನು ವಿರೋಧಿಸುತ್ತಿದ್ದ, ನುಲಿಯ ಚಂದಯ್ಯ ತಮ್ಮ ನಿತ್ಯ ಕಾಯಕ ನಿಷ್ಠೆಯಿಂದ ನಿರ್ಭೀತ ವಿಚಾರಸರಣಿಯಿಂದ, ನಿರ್ಮಲ ವಾದ ನಡೆನುಡಿಯಿಂದ, ನಿರಹಂಕಾರ ವೃತ್ತಿಯಿಂದ ನಿಷ್ಕಲ್ಮಷ ಜೀವನದಿಂದ ಎಲ್ಲರ ಪ್ರೀತಿಗೆ, ಮೆಚ್ಚುಗೆಗೆ ಪಾತ್ರನಾಗಿದ್ದ.

ನುಲಿಯ ಚಂದಯ್ಯ ಕಾಯಕ–ದಾಸೋಹಕ್ಕೆ ಸಂಬಂಧಿಸಿದಂತೆ ಅನೇಕ ವಚನಗಳನ್ನು ಬರೆದಿರಬಹು ದಾಗಿದ್ದರೂ ಸದ್ಯ ೪೮ ವಚನಗಳು ದೊರಕಿವೆ. **'ಚನ್ನಬಸವಣ್ಣಪ್ರಿಯ ಚಂದೇಶ್ವರ ಲಿಂಗ'** ಈತನ ವಚನಗಳ ಅಂಕಿತ.

ಕಲ್ಯಾಣ ಕ್ರಾಂತಿಯ ನಂತರ, ಶರಣರು ಕಲ್ಯಾಣವನ್ನು ತೊರೆದು ದೇಶ ಸಂಚಾರ ಹೊರಟರು. ನುಲಿಯ ಚಂದಯ್ಯ ಶರಣ ಸಂರಕ್ಷಣೆಗಾಗಿ ಹೋರಾಡಿದ್ದಲ್ಲದೆ, ನಂತರ ಉಳವಿ, ಎಣ್ಣೆಹೊಳೆ, ನಂದಿ, ಪದ್ಮಾವತಿ(ನುಲೇನೂರು) ಕಡೆ ತನ್ನ ಸೇವಾಕಾರ್ಯವನ್ನು ಮುಂದುವರೆಸಿದನು. ಈತ ಚಿತ್ರದುರ್ಗ ಜಿಲ್ಲೆ, ಹೊಳಲ್ಕೆರೆ ತಾಲ್ಲೂಕು ನುಲೇನೂರು ಗ್ರಾಮದಲ್ಲಿ ಇಹಲೋಕವನ್ನು ತ್ಯಜಿಸಿದನೆಂದು ತಿಳಿದು ಬರುತ್ತದೆ.

ನುಲಿಯ ಚಂದಯ್ಯ ಸಮಾಜಕ್ಕೆ ನೀಡಿದ ಸಂದೇಶ ಮತ್ತೆ ಮತ್ತೆ ಚಿಂತನೆಗೆ ಒಳಪಡಿಸುವಂಥಹುದು. ಯಾವುದು ಗುರುಲಿಂಗ ಜಂಗಮಪೂಜೆ ಎಂಬುದನ್ನು ಅರ್ಥಪೂರ್ಣ ವಾಗಿ ಹೇಳಿದ್ದಾನೆ.

*ಭಾವಶುದ್ಧಿವಾಗಿಪ್ಪುದೇ ಗುರುಪೂಜೆ*
*ಜ್ಞಾನಶುದ್ಧವಾಗಿಪ್ಪುದೇ ಲಿಂಗಪೂಜೆ*
*ತ್ರಿಕರಣ ಶುದ್ಧವಾಗಿಪ್ಪುದೇ ಜಂಗಮಪೂಜೆ*

ಇಂತಹ ದಿವ್ಯಸಂದೇಶವನ್ನು ನಮಗೆ ನೀಡಿದ ನುಲಿಯ ಚಂದಯ್ಯನ ಜಯಂತಿಯನ್ನು ಇದೇ ಆಗಸ್ಟ್ ೨೪ರಂದು ಆಚರಿಸುವುದರ ಮೂಲಕ ಅವನು ಬಿಟ್ಟುಹೋದ ಆದರ್ಶ ಮಾನವೀಯ ಮೌಲ್ಯಗಳನ್ನು ನೆನಪಿಸಿಕೊಂಡು ಸ್ವಲ್ಪ ಮಟ್ಟಿಗಾದರೂ ಜೀವನದಲ್ಲಿ ಅಳವಡಿಸಿಕೊಂಡರೆ ಬದುಕು ಬಂಗಾರವಾದೀತು !. *

ರಾಷ್ಟ್ರ ಮುಂದುವರಿಯಬೇಕಾದರೆ ಜನರು ಕ್ರಿಯಾಶೀಲರಗಿ ಕಷ್ಟಪಟ್ಟು ಕೆಲಸ ಮಾಡಬೇಕು. ದುಡಿಮೆಗೆ ಮಹತ್ತರವಾದ ಸ್ಥಾನ ಉಂಟು. ಸ್ವಾತಂತ್ರ್ಯ ಬಂದ ಮೇಲೆ ಉಂಟಾಗಿರತಕ್ಕಂತಹ ಒಂದು ತಪ್ಪು ಕಲ್ಪನೆ ಎಂದರೆ ಕಷ್ಟಪಡದೆ ಆರಾಮ ಜೀವನ. ಸುಖವಾಗಿರಬೇಕೆಂಬ ಆಕಾಂಕ್ಷೆವುಳ್ಳವರ ಸಂಖ್ಯೆ ಹೆಚ್ಚಾಗಿದೆ. ಸರ್ಕಾರವೇ ತಾನಾಗಿಯೇ ಎಲ್ಲವನ್ನು ಕೊಡಬೇಕು ಎಂಬ ಭಾವನೆ ಬೇರೂರಿದೆ. ಇದು ಯಾವ ರಾಷ್ಟ್ರಕ್ಕೂ ಶುಭಸೂಚನೆ ಅಲ್ಲ.

–ಶ್ರೀವಾಣಿ

ಚಿಂತನ

## ಕಾಲದ ಕಟ್ಟಳೆಯ ಕಲಿತನ

-ಜಯದೇವಪ್ಪ ಜೈನಕೇರಿ *

ಶರಣ ಧರ್ಮದ ಜೀವನ ತತ್ತ್ವಗಳು ವಚನಗಳಲ್ಲಿ ಅಭಿವ್ಯಕ್ತಗೊಂಡಿವೆ. ಶರಣರ ಅನುಭವಗಳು ವಚನಗಳ ಅಂತಃಸತ್ತ್ವವಾಗಿವೆ, ಮಾನವರೆಲ್ಲರೂ ಸರಿಸಮಾನರೆಂದು ಕಂಡ ಶರಣರು, ಮೂಢನಂಬಿಕೆಗಳನ್ನು, ಕಂದಾಚಾರಗಳನ್ನು ಅಲ್ಲಗಳೆದರು. ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸಿದ ಶರಣರು, ನುಡಿದಂತೆ ನಡೆದು ತೋರಿದರು. ತತ್ತ್ವ ಸಿದ್ಧಾಂತಗಳಿಗೆ, ಭಕ್ತಿ ಪ್ರಾಮಾಣಿಕತೆಯ ಲೇಪನ ಮಾಡಿದರು. ಮಾನವರ ಹಕ್ಕುಗಳು, ಮಾನವೀಯ ಮೌಲ್ಯಗಳ ಕುರಿತು ಚಿಂತಿಸಿದರು. ವಿಚಾರಕ್ರಾಂತಿಯ ಹರಿಕಾರರಾದ ಬಸವಣ್ಣನವರ ಸಮಾಜದಲ್ಲಿ ಜಾತಿ ಭೇದವಿಲ್ಲ, ವರ್ಣಭೇದವಿಲ್ಲ, ವರ್ಗಭೇದವಿಲ್ಲ, ಲಿಂಗಭೇದ ವಿಲ್ಲ ಕಾಯಕದಲ್ಲಿಯೂ ಮೇಲು, ಕೀಳುಗಳಿರಲಿಲ್ಲ. ಆಧುನಿಕ ವಿಜ್ಞಾನಕ್ಕೆ ಸರಿಸಾಟಿಯಾಗಿ ನಿಲ್ಲಬಲ್ಲ ೨೧ನೆಯ ಶತಮಾನ ದಲ್ಲಿಯೂ ಪ್ರಸ್ತುತವಾಗಿರುವ, ಅನೇಕ ವಿಚಾರಗಳನ್ನು ಕುರಿತು ೧೨ನೆಯ ಶತಮಾನದಲ್ಲಿಯೇ ಚಿಂತಿಸಿ ಅನುಷ್ಠಾನಕ್ಕೆ ತಂದರು. ಸತ್ಯ ಶುದ್ಧ ಕಾಯಕ, ತನ್ಮೂಲಕ ದಾಸೋಹ, ಶರಣರು ಕಟ್ಟ ಬಯಸಿದ ಸಮಾಜ, ಜನ ಸಾಮಾನ್ಯರ ಸರ್ವತೋಮುಖ ಏಳ್ಗೆ ಬಸವಣ್ಣನವರ ಶರಣಧರ್ಮದ ಮೂಲ ಆಶಯವಾಗಿತ್ತು. ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಕ್ರಾಂತಿಯಿಂದ, ಆರ್ಥಿಕವಾಗಿ, ಬೌದ್ಧಿಕವಾಗಿ ಜನ ಸಾಮಾನ್ಯರೂ ಶರಣರಾಗಿ ಹೆಮ್ಮೆಯಿಂದ ಜೀವಿಸುವಂತಾಗಿದ್ದು ಇತಿಹಾಸ. ಬಸವಣ್ಣನವರ ಭಕ್ತಿಮಾರ್ಗಕ್ಕೆ ತತ್ತ್ವ ಸಿದ್ಧಾಂತಗಳ ನೀತಿ ಸಂಹಿತೆಯನ್ನು ರೂಪಿಸಿ ಜ್ಞಾನ ಮಾರ್ಗ ತೋರಿದವರು ಅಲ್ಲಮಪ್ರಭುದೇವರು. ಗುರುವು ತನ್ನ ಶಿಷ್ಯರಿಗೆ ಜ್ಞಾನ ನೀಡುವ, ವಿವಿಧ ಕಾಲಘಟ್ಟಗಳ ವಿಶ್ಲೇಷಣೆಯನ್ನು ಕೆಳಗಿನ ವಚನದಲ್ಲಿ ಗಮನಿಸಬಹುದು.

*ಕೃತಯುಗದಲ್ಲಿ ಶ್ರೀಗುರುವು ಶಿಷ್ಯಂಗೆ ಬಡಿದು ಬುದ್ಧಿಯ*
*ಕಲಿಸಿದಡೆ ಆಗಲಿ ಮಹಾಪ್ರಸಾದವೆಂದೆನಯ್ಯಾ,*
*ತ್ರೇತಾಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬೈದು ಬುದ್ಧಿಯ*
*ಕಲಿಸಿದಡೆ ಆಗಲಿ ಮಹಾಪ್ರಸಾದವೆಂದೆನಯ್ಯಾ*
*ದ್ವಾಪರ ಯುಗದಲ್ಲಿ ಶ್ರೀಗುರುವು ಶಿಷ್ಯಂಗೆ ಝುಂಕಿಸಿ ಬುದ್ಧಿಯ*
*ಕಲಿಸಿದಡೆ ಆಗಲಿ ಮಹಾಪ್ರಸಾದವೆಂದೆನಯ್ಯಾ*
*ಕಲಿಯುಗದಲ್ಲಿ ಶ್ರೀ ಗುರು ಶಿಷ್ಯಂಗೆ ವಂದಿಸಿ ಬುದ್ಧಿಯ*
*ಕಲಿಸಿದಡೆ ಆಗಲಿ ಮಹಾಪ್ರಸಾದವೆಂದೆನಯ್ಯಾ*
*ಗುಹೇಶ್ವರಾ ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ ನಾನು*
*ಬೆರಗಾದೆನು.*

-ಅಲ್ಲಮಪ್ರಭು

ಇಲ್ಲಿ ಕೃತ, ತ್ರೇತ, ದ್ವಾಪರ, ಕಲಿ ಮತ್ತು ಬಡಿದು, ಬೈದು, ಝುಂಕಿಸಿ, ವಂದಿಸಿ ಶಬ್ದಗಳು ಒಮ್ಮೆ ಮಾತ್ರ ಪ್ರಯೋಗವಾಗಿವೆ. ಉಳಿದ ಬಹುತೇಕ ಶಬ್ದಗಳು ನಾಲ್ಕು ನಾಲ್ಕು ಬಾರಿ ಪ್ರಯೋಗವಾಗಿವೆ. ಪುನರುಕ್ತಿಗಳಿಂದಲೇ ಒಂದು ಅದ್ಭುತವಾದ, ಚಿಂತನಾರ್ಹವಾದ, ಸಮಕಾಲೀನ ಸಂದರ್ಭಕ್ಕೂ ಉಲ್ಲೇಖಿಸಬಹುದಾದ ಮೇಲಿನ ವಚನ ಇಂದಿಗೂ ವ್ಯಾಪಕವಾಗಿ ಬಳಕೆಯಲ್ಲಿದೆ. ಇಲ್ಲಿ ಕಾಣುವ ಭಾಷಾ ಪ್ರಯೋಗದ ಚಮತ್ಕಾರ ಗಮನಾರ್ಹವಾಗಿದೆ. ಕೇವಲ ನಾಲ್ಕು ಶಬ್ದಗಳ ಮೂಲಕ ನಮ್ಮ ಕಾಲದ ಕಟ್ಟಳೆಯನ್ನು ಕಟ್ಟಿಕೊಡುವ, ಅನಾವರಣಗೊಳಿಸುವ ಅಲ್ಲಮರ ಪರಿ ಅನನ್ಯವಾದದ್ದು, ವಿಸ್ಮಯ ಮೂಡಿಸುವಂತಹುದು.

ಗುರು, ಶಿಷ್ಯ ಸಂಬಂಧಗಳು ಕಾಲಕಾಲಕ್ಕೆ ಹೇಗೆ ಬದಲಾಗುತ್ತದೆಂಬ ಅಲ್ಲಮರ ವಚನ ನನ್ನ ವಿದ್ಯಾರ್ಥಿ ಜೀವನಕ್ಕೆ ಕರೆದೊಯ್ದಿತು. ಕಳೆದ ಶತಮಾನದ ಸ್ವಾತಂತ್ರ್ಯ ಪೂರ್ವದಲ್ಲಿ ಹುಟ್ಟಿದ ನಾನು ಮನೆಯಲ್ಲಿ ಬೈಗುಳದ ಸವಿಯನ್ನು ಉಂಡು, ಶಾಲೆಯಲ್ಲಿ ಬೈಗುಳದ ಜೊತೆಗೆ ಬೆತ್ತದ ರುಚಿ ಸವಿಯುತ್ತಲೇ ಬೆಳೆದವನು. ಆನೇ ತರಗತಿಯವರೆಗೂ ನಮ್ಮ ಗುರುಗಳು ಬಲವಾದ ಬೆತ್ತವಿಲ್ಲದೆ ತರಗತಿಗೆ ಬರುತ್ತಲೇ ಇರಲಿಲ್ಲ. ಗುರುಗಳೆಂದರೆ ಹೊಡೆಯುವುದಕ್ಕೇ ಹುಟ್ಟಿದವರು ಎಂಬ ನಂಬಿಕೆ ಇದ್ದ ಕಾಲ. ಅಂದು ಶಿಕ್ಷಕರು ಎಂದರೆ ಶಿಕ್ಷೆ ನೀಡುವವರು. ಶಾಲೆ ಎಂದರೆ ಶಿಕ್ಷೆ ನೀಡುವ ತಾಣವೆಂದೇ, ಅಂದಿನ ತಂದೆ ತಾಯಿಗಳು ಭಾವಿಸಿದ್ದರು. ನನ್ನ ತಮ್ಮಂದಿರ ಕಾಲಕ್ಕೆ ಸುಮಾರು ೬೦ರ ದಶಕದಲ್ಲಿ ಬೆತ್ತಗಳು ಶಾಲೆಯಿಂದ ಮಾಯವಾದವು. ಆದರೆ ಬೈದು ಹೇಳುವ ಪರಿಪಾಠವಿತ್ತು. ನನ್ನ ಮಗನ ಕಾಲಕ್ಕೆ ಅಂದರೆ ೭೦ರ ದಶಕದಲ್ಲಿ ಝುಂಕಿಸಿ ಬುದ್ಧಿ ಹೇಳುತ್ತಿದ್ದರು. ೮೦ರ ದಶಕದ ನಂತರ ಮೊಮ್ಮಕ್ಕಳ ಕಾಲಕ್ಕೆ ಶಿಷ್ಯನಿಗೆ ವಂದಿಸಿ, ರಮಿಸಿ ಆಟ ಆಡಿಸಿ ಪಾಠ ಹೇಳುತ್ತಿರುವುದೂ ನಮ್ಮ ಕಾಲದ ಕಟ್ಟಳೆಯ ಕಲಿತನವೆಂದರೆ ಅತಿಶಯೋಕ್ತಿ ಏನೂ ಅಲ್ಲ. ಚರಿತ್ರೆ ತನ್ನಷ್ಟಕ್ಕೆ ತಾನೇ ಪುನರಾವರ್ತನೆಗೊಳ್ಳುತ್ತದೆ ಎಂಬ ಮಾತಿಗೆ ಸಾಕ್ಷಿಯಾಗಿದೆ ಮೇಲಿನ ವಚನ. *

* ನಂ. 87, ಶಾಂತಲಾ, ಕುವೆಂಪು ರಸ್ತೆ, ಶಿವಮೊಗ್ಗ-577 201.



ಧಾರ್ಮಿಕ

## ವಚನಗಳಲ್ಲಿ ಇಷ್ಟಲಿಂಗಪೂಜಾ ವಿಧಾನ

-ರುದ್ರಮೂರ್ತಿ ಎಲೆರಾಂಪುರ *

**ಇಷ್ಟಲಿಂಗ ಧಾರಣೆ :**

*ಕಾಂಚನಕ್ಕೆ ಕೈಯಾನದಿರ್ದಡೆ*
*ಕರಸ್ಥಲದಲ್ಲಿ ಧರಿಸುವುದಯ್ಯಾ ಶಿವಲಿಂಗವ*
*ಕಾಂಕ್ಷೆಯಿಲ್ಲದಿರ್ದಡೆ ಕಕ್ಷೆಯಲ್ಲಿ ಧರಿಸುವುದಯ್ಯಾ ಶಿವಲಿಂಗವ*
*ಅಪ್ಪಿಲ್ಲದಿರ್ದಡೆ ಉರ ಸಜ್ಜೆಯಲ್ಲಿ ಧರಿಸುವುದಯ್ಯಾ ಶಿವಲಿಂಗವ*
*ಅನ್ನಪಾನಾದಿಗಳಿಗೆ ಬಾಯ್ದೆರೆಯದಿರ್ದಡೆ*
*ಅಮಳೋಕ್ಯದಲ್ಲಿ ಧರಿಸುವುದಯ್ಯಾ ಶಿವಲಿಂಗವ*
*ಭಿನ್ನ ಶಬ್ದಾವಿಲ್ಲದಿರ್ದಡೆ ಮುಖ ಸಜ್ಜೆಯಲ್ಲಿ*
*ಧರಿಸುವುದಯ್ಯಾ ಶಿವಲಿಂಗವ*
*ಲೋಕಕ್ಕೆರಗದಿರ್ದಡೆ ಉತ್ತಮಾಂಗದಲ್ಲಿ*
*ಧರಿಸುವುದಯ್ಯಾ ಶಿವಲಿಂಗವ*
*ನಾಭಿಯಿಂದ ಕೆಳಕ್ಕೆ ಧರಿಸಲಾಗದು*
*ಅದೇನು ಕಾರಣವೆಂದಡೆ,*
*ಅದು ಹೇಯಸ್ಥಾನವಾದುದಾಗಿ*
*ಜಿಹ್ವೆ ತಾಗಿದ ಸಕಲ ರುಚಿಯೂ ಗಳದಿಂದಿಳುವುದಾಗಿ*
*ಗಳವೇ ವಿಶೇಷ ಸ್ಥಳವೆಂದು ಗಳದಲ್ಲಿ ಧರಿಸಿದೆನಯ್ಯಾ*
*ಕೂಡಲಚೆನ್ನಸಂಗಮದೇವಾ.*

-ಚೆನ್ನಬಸವಣ್ಣ

ಪರಧನಕ್ಕೆ ಕೈ ಚಾಚದಿದ್ದರೆ ಇಷ್ಟಲಿಂಗವನ್ನು ಕರಸ್ಥಲದಲ್ಲಿ ಇಟ್ಟುಕೊಂಡು (ಕಟ್ಟಿಕೊಂಡು) ಪೂಜಿಸಬಹುದು. ಆಸೆ-ಆಕಾಂಕ್ಷೆ, ಬಯಕೆಗಳಿಲ್ಲದಿದ್ದರೆ(ಬಗಲು) ಕಂಕುಳದಲ್ಲಿ ಧರಿಸಿಕೊಳ್ಳಬಹುದು. ತನ್ನ ಸತಿಯನ್ನುಳಿದು ಪರಸತಿಯರನ್ನು, ತನ್ನ ಪತಿಯನ್ನು ಉಳಿದು ಪರ ಪತಿಯನ್ನು ಆಲಂಗಿಸುವ ಆಸೆ ಕನಸು-ಮನಸ್ಸಿನಲ್ಲಿಯೂ ಇಲ್ಲದಿದ್ದಲ್ಲಿ ಇಷ್ಟಲಿಂಗವನ್ನು ಎದೆಯ ಭಾಗದಲ್ಲಿ ಧರಿಸಬಹುದು. ಅನಾವಶ್ಯಕವಾಗಿ ಆಹಾರ ಪಾನೀಯಗಳನ್ನು ಮುಟ್ಟಿ ಸೇವಿಸದಿದ್ದಲ್ಲಿ ಕೊರಳಿನಲ್ಲಿ ಇಷ್ಟಲಿಂಗವನ್ನು ಧರಿಸಿಕೊಳ್ಳಬಹುದು. ಕೆಟ್ಟ ನುಡಿಗಳನ್ನು ನುಡಿಗಳನ್ನು ನುಡಿಯದಿದ್ದರೆ ಮುಖದಲ್ಲಿ ಇಷ್ಟಲಿಂಗವನ್ನು ಧರಿಸಿಕೊಳ್ಳಬಹುದು. ಲೋಕದ ವಿಷಯ ವ್ಯವಹಾರಗಳಿಗೆ ವಶವಾಗಿ ತಲೆಬಾಗಿಸದಿರ್ದಡೆ ಶಿರದಲ್ಲಿ ಇಷ್ಟಲಿಂಗವ ಧರಿಸಿಕೊಳ್ಳಬಹುದು. ಹೊಕ್ಕಳದಿಂದ ಕೆಳಕ್ಕೆ ಮಲಮೂತ್ರಗಳು ತುಂಬಿರುವ ಸ್ಥಳವಾದುದರಿಂದ ಲಿಂಗವನ್ನು ಯಾವುದೇ ಕಾರಣಕ್ಕೂ ಆ ಭಾಗದಲ್ಲಿ ಇಷ್ಟಲಿಂಗವನ್ನು ಧರಿಸಬಾರದು ಎಂದು ಹೇಳುತ್ತಾರೆ.

ನಾಲಿಗೆ ಸೋಂಕಿದ ಸಕಲ ರುಚಿಯೂ ಕಂಠದಲ್ಲಿ ಇಳಿದು ಅದರ ಸಾರ ಸತ್ತ್ವಗಳು ಶರೀರಕ್ಕೆಲ್ಲಾ ವ್ಯಾಪಿಸುವುದರಿಂದ ಕಂಠಭಾಗವೇ ವಿಶೇಷ ಸ್ಥಳ. ಆ ಕಂಠ ಭಾಗದಲ್ಲಿ ಇಷ್ಟಲಿಂಗವನ್ನು ಕಟ್ಟಿದರೆ ಆ ಇಷ್ಟಲಿಂಗದ ತತ್ತ್ವ ಮಹತ್ವಗಳು ಆಹಾರದ ಸತ್ತ್ವದಂತೆ ಶರೀರಕ್ಕೆಲ್ಲಾ ವ್ಯಾಪಿಸುವುದರಿಂದ ಕಂಠದಲ್ಲಿಯೇ ಇಷ್ಟಲಿಂಗವನ್ನು ಧರಿಸಬೇಕೆಂದು ಚೆನ್ನಬಸವಣ್ಣನವರು ತಿಳಿಸುತ್ತಾರೆ.

**ಇಷ್ಟಲಿಂಗಪೂಜೆ :**

*ಗಾಂಧಾರಿ ಮಾಂಧಾರಿ ಎಂಬ ಅಹೋರಾತ್ರಿಯಲ್ಲಿ*
*ಲಿಂಗವ ಪೂಜಿಸಬೇಕು*
*ಊರ ಕೋಳಿ ಕೂಗದ ಮುನ್ನ ಕಾಡ ನವಿಲು ಒದರದ ಮುನ್ನ*
*ಲಿಂಗವ ಪೂಜಿಸಬೇಕು*
*ಗೋವುಗಳಾ ಕೊಲುವ ಪಾಪಿಯ ದನಿಯ ಕೇಳದ ಮುನ್ನ*
*ದುಂಬಿ ಮುಟ್ಟಿ ಪುಷ್ಪ ನಿರ್ಮಾಲ್ಯವಾಗದ ಮುನ್ನ*
*ಲಿಂಗವ ಪೂಜಿಸಬೇಕು*
*ತನ್ನೊಡನೆ ಮಲಗಿರ್ದ ಸತಿಯನೆಬ್ಬಿಸದೆ*
*ಶಿವಲಿಂಗಕ್ಕೆರೆವ ಭಕ್ತನ ತೋರಿ ಬದುಕಿಸಯ್ಯ*
*ಕೂಡಲಸಂಗಮದೇವಾ.*

ಸೂರ್ಯ ಉದಯವಾಗದ ಮುನ್ನ, ಕೋಳಿಯೂ ಕೂಗದ ಮುನ್ನ ಕಾಡಿನ ನವಿಲೂ ಕೂಡ ಎಚ್ಚರಗೊಂಡು ಶಬ್ದ ಮಾಡದ ಮುನ್ನ ತಮ್ಮ ಕೃಷಿ ಕಾರ್ಯಕ್ಕಾಗಿ ಪಶುಗಳನ್ನು ಕಾಯಕಕ್ಕೆ ತೊಡಗಿಸಿಕೊಳ್ಳುವ ಮುನ್ನ, ದುಂಬಿಗಳು ಎಚ್ಚರಗೊಂಡು ಮಕರಂದಕ್ಕಾಗಿ ಆಗತಾನೆ ಅರಳಿದ ಹೂವು ಗಳನ್ನು ಮುಟ್ಟಿ ಮುಟ್ಟಿ ಎಂಜಲು ಮಾಡದ ಮುನ್ನ ಹೂಗಳನ್ನು ಎತ್ತಿಕೊಂಡು ಪತಿಯಾದರೆ ತನ್ನೊಡನೆ ಮಲಗಿರ್ದ ಸತಿಯನ್ನೂ ಎಬ್ಬಿಸದೆ, ಸತಿಯಾದರೆ ತನ್ನ ಪತಿಯ ಏಳುವ ಮುನ್ನ ಶಿವಲಿಂಗವನ್ನು ಪೂಜಿಸಬೇಕು ಎಂದು ಬಸವಣ್ಣನವರು ಹೇಳುತ್ತಾ; ಅಂತಹ ಭಕ್ತರನ್ನು ತೋರಿ ನನ್ನನ್ನು ಬದುಕಿಸಯ್ಯ ಎಂದು ಅಂಗಲಾಚುತ್ತಾರೆ. *

* 'ಅನುಭವ ಮಂಟಪ' 4ನೇ ಅಡ್ಡರಸ್ತೆ, ಬಸವೇಶ್ವರ ಬಡಾವಣೆ, ಕ್ಯಾತ್ಸಂದ್ರ, ತುಮಕೂರು.

## ಸರ್ವಜ್ಞನ ವಚನಗಳು

***ಸತ್ಯರಿಗೆ ಧರೆಯಲಿ । ಮಸ್ತಕದಿನೆರಗುವರು
ಹೆತ್ತ ತಾಯಿ ಮಗನ ಕರೆಯುವಂತೆ, ಶಿವನವರದಿ
ನೆತ್ತಿಕೊಂಬುವನು ಸರ್ವಜ್ಞ ।***

ಈ ಮೇಲಿನ ವಚನದ ಸಾರವೆಂದರೆ ಸತ್ಯವೇ ದೇವರು ಎಂಬ ಮಾತು ನೆನಪಿಗೆ ತರುವಂತಿದೆ. ಸರ್ವಜ್ಞನ ಪ್ರಕಾರ ಸತ್ಯವಂತರಿಗೆ, ಪ್ರಾಮಾಣಿಕರಿಗೆ, ಈ ಜಗದೊಳಗೆ ಇರುವವರೆಲ್ಲರು ನಮಸ್ಕರಿಸುವರು. ಅಂಥ ಮಹಾನ್ ವ್ಯಕ್ತಿಗಳನ್ನು ಯಾವ ರೀತಿ ಹಡೆದ ತಾಯಿಯು ತನ್ನ ಮಗುವನ್ನು ಮುದ್ದಿಸಿ, ಅಕ್ಕರೆಯಿಂದ ಕರೆದುಕೊಳ್ಳುವಂತೆ, ಶಿವನು (ಸತ್ಯವಂತರಿಗೆ) ಎತ್ತಿ ಕೊಳ್ಳುವನು ಎಂದಿದ್ದಾರೆ.

* * *

***ಹಾಲಿನ ಹಸು ಲೇಸು । ಶೀಲದ ಶಿಶು ಲೇಸು ।
ಬಾಲೆಯು ಸಜ್ಜನೆಯು ಲೇಸು, ಹುಸಿಯಾಡದ
ನಾಲಿಗೆಯು ಲೇಸು ಸರ್ವಜ್ಞ ।***

ಈ ಮೇಲಿನ ಸಾಲುಗಳು 'ನಾಲಿಗೆ ಒಳ್ಳೆಯದಿದ್ದರೆ, ನಾಡೆಲ್ಲಾ ಒಳ್ಳೆಯದು' ಎಂಬ ಗಾದೆ ಮಾತು ಜ್ಞಾಪಕಕ್ಕೆ ತರುತ್ತದೆ. ಯಾಕೆಂದರೆ ಹಾಲು ಕರೆಯುವಂತಹ ಆಕಳು ಒಳ್ಳೆಯದಿದ್ದಂತೆ, ಶೀಲವಂತ ಮಗುವು, ಸದ್ಗುಣ ಶೀಲೆಯಾದ ಬಾಲೆಯೂ, ಒಳ್ಳೆಯವರಾದರೆ, ಹುಸಿ4 (ಸುಳ್ಳು) ನುಡಿಯದ ನಾಲಿಗೆ ಶ್ರೇಷ್ಟವಾದುದೆಂದು ಸರ್ವಜ್ಞನು ಹೇಳಿದ್ದಾನೆ.

* * *

***ಮಾತಿನಂ ನಗೆ ಹನಿಯು । ಮಾತಿನಿಂ ಹಗೆ ಕೊನೆಯು
ಮಾತಿನ ಸಕಲ ಸಂಪದವು, ಮಾತೇ
ಮಾಣಿಕ್ಯವು ಸರ್ವಜ್ಞ***

ಎಂಬ ನುಡಿಯನ್ನು ನುಂಗಿ, ಅರಗಿಸಿಕೊಂಡು, ಜೀವನದಲ್ಲಿ ಅಳವಡಿಸಿಕೊಂಡು, ಸಮೂಹ ಜೀವನಕ್ಕೆ ಹೊಂದಿಸಿಕೊಂಡು, ನಾಲಿಗೆಯ ಮೇಲೆ ಹಿಡಿತವಿದ್ದರೆ ಜಗಳ ಹುಟ್ಟುವುದಿಲ್ಲ, ರೋಗವೂ ಹುಟ್ಟುವುದಿಲ್ಲ ಎಂಬ ಅಂಶವನ್ನು ತಿಳಿದುಕೊಂಡು ಪ್ರತಿಯೊಬ್ಬರೂ ಬದುಕ ಬೇಕಾಗಿದೆ, ಬದುಕಬೇಕು ಕೂಡಾ !

–ರಮೇಶಬಾಬು ಯಾಳಗಿ, ಸುರಪುರ.

## ತಿರುಕ್ಕುರುಳ್

ಅಧ್ಯಾಯ –೨೩
ಗೃಹಧರ್ಮ

### ದಾನ

ಬಡವರಿಗೊಂದನು ಕೊಡುವುದೇ ದಾನವೆನಿಸುವುದು ;
ಮಿಕ್ಕವೆಲ್ಲಾ ಪ್ರತಿಫಲವ ನೋಡುವ ಗುರಿಯುಳ್ಳದುದು.

ಬೇಡುವುದು ಋಜುಮಾರ್ಗವೆಂದರೂ ಲೇಸಲ್ಲವದು;
ಪರಲೋಕ ಲಭಿಸದೆಂದೂ ಈವುದೇ ಲೇಸು.

ಬಡವ ತಾನೆಂದು ಕೀಳ್ನುಡಿಯನಾಡದೆ ಬೇಡಿದವಗೆ
ಕೊಡೂವುದು ಕುಲಜವ ಗುಣವದು.

ಬೇಡುವವರ ನಗೆಮೊಗವ ಕಾಣುವವರೆಗೆ ಅವರಿಂದ
ಬೇಡಿಸಿಕೊಳ್ವುದೂ ದುಃಖವನು ತರುವುದು.

ಹಸಿವ ತಾಳುವ ತಪಸಿಗಳ ಬಲಕಿಂತ, ಬಡವರ
ಹಸಿವ ತೀರಿಸುವ ದಾನಿಗಳ ಬಲವದು ಹಿರಿದು.

ಬಡವರ ಕಡು ಹಸಿವ ತೀರಿಸುವುದು, ಒಬ್ಬಂಗೆ
ತನ್ನ ಸಂಪದವ ಸಂರಕ್ಷಿಸಿಡುವ ಸ್ಥಳವದು.

ಹಲವರಿಗೆ ಹಂಚಿಕೊಟ್ಟುಣುವ ಅಭ್ಯಾಸವುಳ್ಳವಗೆ
ಹಸಿವೆಂಬ ಕೆಟ್ಟರೋಗವದು ಸೋಂಕದು.

ಕೊಟ್ಟು ನಲಿವ ಸುಖವನರಿಯರೋ ತಮ್ಮ ಸಿರಿಯ
ಕೂಡಿಟ್ಟು ಕಳಕೊಳುವ ಕಲ್ಲೆದೆಯರು ?

ಬೇಡುವುದಕಿಂತ ದುಃಖವದು ದುಡಿದು ಕೂಡಿಟ್ಟುದನು,
ತಾನೇ ಒಂಟಿಯಾಗಿ ಉಂಬುದು.

ಸಾವಿಗಿಂತ ಸಂಕಟವಾದುದಿಲ್ಲ; ಆ ಸಾವೇ ಹಿತವಹುದು
ದೀನರಿಗೊಂದನು ಕೊಡಲಾಗದ ಸ್ಥಿತಿಯಿರಲು

ಕನ್ನಡ ಅನುವಾದ : ನ. ಮುನಿಸ್ವಾಮಿ







## ನಡೆ–ನುಡಿ

–ಈಶ್ವರ ಮಂಟೂರ *

ನಮ್ಮ ನಡೆ ನುಡಿ, ಆಚಾರ–ವಿಚಾರ, ಮಾತು–ಮನಗಳ ಬಗ್ಗೆ ಶರಣರು ಬಹು ಚೆನ್ನಾಗಿ ಚಿಂತನೆಗೈಯ್ದು, 'ನುಡಿದಂತೆ ನಡೆ ಈ ಜನ್ಮ ಕಡೆ, 'ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮ ದೇವನೆಂತೊಲಿವನಯ್ಯ' ಎಂದು ಕಿವಿಯಲ್ಲಿ ಉಸಿರಿದರೂ, ಬಹುಶಃ ನಾವಾರೂ ಎಚ್ಚರಗೊಂಡಂತಿಲ್ಲ. ನಮ್ಮ ಮಾತು–ಮನಗಳ ಮೈಲಿಗೆ ಕಳೆದಿಲ್ಲ. ನಾವಾಡುವುದು ಕಂಠದ ಮಾತುಗಳೇ ಹೊರತು, ಕರುಳು ಮಾತುಗಳಲ್ಲ.

ಗೊ.ರು.ಚ. ಅವರು ಹೇಳುತ್ತಾರೆ–'ಜೀವನದ ಮೌಲ್ಯಗಳ ಬಗ್ಗೆ ಅದ್ಭುತವಾಗಿ ನುಡಿಯುವವರಿಗೇನು ಕೊರತೆಯಿಲ್ಲ. ಜೇನಿಗಿಂತಲೂ ಸವಿಯಾದ ಮಾತಿನ ಮಾಲೆ ಕಟ್ಟುವವರಿಗೇನು ಕೊರತೆಯಿಲ್ಲ. ಆದರೆ ನಡೆ–ನುಡಿಗಳೊಂದಾದವರ ಕೊರತೆ ಇದೆ' ಎಂದು.

ನುಡಿಯಂತೆ ನಡೆಯದವರು ಬಹು ಜನರು; ಉಪದೇಶ ಮಾಡಿದಂತೆ ನಡೆಯುವವರು ಬಹು ವಿರಳ. **'ಮಾತಿನಂತೆ ಮನವಿಲ್ಲದ ಜಾತಿ ಡೊಂಬರನೇನೆಂಬೆ?'** ಎಂದು ಶರಣರು, ಸಂತರು ಅನುಭಾವಿಗಳು ಇಂಥ ನೂರಾರು ಚಾಟಿಯೇಟು ಕೊಟ್ಟರೂ ನಮಗೆ ಜ್ಞಾನ ಬರಲಿಲ್ಲ. ಮನದಲ್ಲಿನ ದ್ವೇಷಾಸೂಯೆಯ ದಳ್ಳುರಿ ಆರಲಿಲ್ಲ. ಜೀವನದ ಶಾಂತಿಯ ತೋಟ ದಹಿಸದೆ ಇರಲಿಲ್ಲ. ಈ ಜಗತ್ತನ್ನು ಮೃದು ಮಾತುಗಳಿಂದ, ನಿರ್ಮಲವಾದ ಮಂದ ಹಾಸದಿಂದ, ಗೆಲ್ಲಬಹುದೆಂಬುದನ್ನೇ ಮರೆತು, ಬದುಕಿನ ತುಂಬೆಲ್ಲ ದ್ವೇಷ, ಮತ್ಸರಗಳ ಹೊಗೆಯನ್ನೇ ಹರವಿಕೊಂಡೆವು. ಬಣ್ಣದ ಮಾತುಗಳನ್ನಾಡುವುದನ್ನು ಬಿಟ್ಟು, ಶರಣರ ಒಳ್ನುಡಿಗಳನ್ನು, ಸೂಳ್ನುಡಿಗಳನ್ನು ಮೆಲುಕು ಹಾಕುತ್ತಾ, ನಿಂದೆ–ವಂಚನೆಗಳಿಂದ ಬಹು ದೂರ ಸರಿದು ಸತ್ಪಥ ಸಾಧಕರಾಗಬೇಕು.

**'ಬಾಯಲ್ಲಿ ಹಣ್ಣು, ಮನದಲ್ಲಿ ಹುಣ್ಣು ಇದ್ದವನ ಬಾಳೆಲ್ಲ ಮಣ್ಣು–ಮಣ್ಣು'** ಅರಿವಿನ ಕಣ್ತೆರೆಯುವ ಮಾತು ನಮ್ಮದಾಗಿರಬೇಕೇ ವಿನಃ ಇನ್ನೊಬ್ಬರ ಕಣ್ತೆಗೆಯುವ ಮಾತಾಗಬಾರದು. 'ನಿಂದಿಸಿ ನುಡಿಯದಿರಾರನು' ಎಂದು ಹೇಳಿಲ್ಲವೇ ಶ್ರೀ ನಿಜಗುಣರು. ಹುಸಿ ಮಾತು ನಮ್ಮ ಬದುಕಿಗೆ ಮಸಿ ಇಳಿಸುತ್ತದೆ. ಮಾತಿನಿಂದಲೇ ನಮ್ಮ ವ್ಯಕ್ತಿತ್ವ ನಿರ್ಮಾಣ ನಮ್ಮ ಸಾಧನೆ ಮಾತನಾಡಬೇಕು. ಮಾತನಾಡುವುದೇ ನಮ್ಮ ಸಾಧನೆಯಾಗಬಾರದು.

ಬದುಕಿನ ಅಮೂಲ್ಯ ಕ್ಷಣಗಳನ್ನೆಲ್ಲ 'ಹಸಿವೆ, ತೃಷೆ, ವಿಷಯ, ಆಶೆ–ಆಮಿಷ, ವಿಲಾಸ, ವಿನೋದ, ವಿಹಾರ, ಮೋಜು, ಜೂಜು, ಹರಟೆ, ಆತ್ಮಸ್ತುತಿ, ಪರಪೀಡನೆ, ಪರನಿಂದೆ, ಕೀಳ್ನುಡಿಗಾಗಿ ಮೀಸಲಾಗಿಟ್ಟು, ದೇವನನ್ನೇ ಕಡೆಗಣಿಸಿದವು ಎನ್ನುತ್ತಾರೆ ಸಿದ್ಧಯ್ಯ ಪುರಾಣಿಕರು.

**'ಮಾತಿನಿಂ ನಗೆ–ನುಡಿಯು, ಮಾತಿನಿಂ ಹಗೆ–ಕೊಲೆಯು, ಮಾತಿನಿಂದ ಸರ್ವಸಂಪದವು'** ಎನ್ನುವ ಸರ್ವಜ್ಞನ ತ್ರಿಪದಿ ನಮಗೆ ದಾರಿದೀಪವಾಗಬೇಕು. ಬಲ್ಲವನ ಬೆಲ್ಲದ ಮಾತಿಗೆ ಜಗಳವಿಲ್ಲ. ಮನ ಮೆಚ್ಚಿ ಒಪ್ಪಿಗೆ ಕೊಟ್ಟ ಮಾತುಗಳು ನೂರಾರು ಕಾಲ ಕೇಳುಗರ ಎದೆಯ ಗದ್ದುಗೆ ಏರಿ ಸಂಭ್ರಮಿಸುತ್ತವೆ.

'ಮೃದು ವಚನಗಳೇ ಸಕಲ ಜಪತಪಂಗಳಯ್ಯ', 'ಮಾತೆಂಬುದು ಜ್ಯೋತಿರ್ಲಿಂಗ' ಇವೇ ಶರಣರ ಮಂತ್ರ ಗಳು. ಮನುಷ್ಯನ ಮಾತಿಗೂ, ಮನಕ್ಕೂ ಇರುವ ದೂರ ಕಡಿತವಾಗಬೇಕು. ಕಾಯಾ, ವಾಚಾ, ಮನಸಾ ಆತ್ಮಸೇವೆಗೆ ಪರಿಶುದ್ಧವಾದ ನುಡಿ ನುಡಿಯಬೇಕು. ಅಂತೆಯೇ ನಡೆಯ ಬೇಕು.

ಶರಣರು ಸೌಜನ್ಯದ ನುಡಿಗಳನ್ನು ಆಡಿ, ತನ್ಮೂಲಕ ಮನುಷ್ಯನ ಬದುಕಿನ ಪಥಕ್ಕೆ ಮಹಾ ಬೆಳಕನ್ನೇ ಕರುಣಿಸಿದ್ದಾರೆ. ಮಾಣಿಕ್ಯ ದೀಪ್ತಿಯನ್ನು ಹಿಡಿದು ಉದ್ಧಾರವಾಗುವ ಹೆದ್ದಾರಿ ತೋರಿದ್ದಾರೆ. ಅವರದು ಉದರವಾಣಿಯಲ್ಲ, ಉದಾರವಾಣಿ, ಅಂತಹ ವಾಣಿಯೇ ದೇವಲೋಕ. ಮಾತನಾಡುವುದು ಒಂದು ಕಲೆ. ಮಾತು ನಮ್ಮ ಅಳಿವು–ಉಳಿವುನ ಬಾಳ ಸೇತುವೆ. ನೊಂದ ಹೃದಯಕ್ಕೆ ಸಾಂತ್ವನದ ನುಡಿಯೇ ದಿವ್ಯೌಷಧ. ❋

* 1319, ಶಿವಪ್ರಸಾದ, ಶ್ರೀ ಬಸವೇಶ್ವರ ಬಡಾವಣೆ, ರಾಮತೀರ್ಥ ನಗರ, ಬೆಳಗಾವಿ ಜಿಲ್ಲೆ–590 016.



# ಶ್ರಾವಣದಲ್ಲಿ ಮಣ್ಣಿನ ಪೂಜೆ

-ಈರಯ್ಯ ಕಿಲ್ಲೇದಾರ *

ಜನಪದದಲ್ಲಿ ಸಾಹಿತ್ಯ ದೇಶೀ ಸಂಸ್ಕೃತಿಯ ಹಿರಿಮೆ, ಗರಿಮೆಗಳನ್ನು ಸಾರುವುದರ ಜೊತೆಗೆ ರೈತರ ಬದುಕಿನ ಪ್ರತಿಬಿಂಬವೂ ಆಗಿದೆ. ಹಬ್ಬ, ಹುಣ್ಣಿಮೆಗಳ ಆಚರಣೆ ಮತ್ತು ಪೂಜೆಗಳು ಬದುಕಿನ ಅವಿಭಾಜ್ಯ ಅಂಗ ಎನಿಸಿವೆ. ಅವುಗಳಲ್ಲಿ ಅರ್ಥವಿದೆ. ವಿಜ್ಞಾನ ಇದೆ. ದರ್ಶನವೂ ಇದೆ. ಅರಿಯುವ ಬುದ್ಧಿಯ ಅವಶ್ಯಕತೆಯಿದೆ. ಪೂಜೆ ಪುನಸ್ಕಾರಗಳಲ್ಲಿ ಸಮರ್ಪಣಾಭಾವ ಇದೆ. ಚಂಚಲ ವಾದ ಮನಸ್ಸನ್ನು ಕೇಂದ್ರೀಕರಿಸುವ ಸಾಧನವಾಗಿ ಪೂಜೆ ಮುಖ್ಯವೆನಿಸುತ್ತದೆ. ಪರಿಸರದ ಪ್ರೇರಣೆಯೆ ಪೂಜೆಗೆ ಆಧಾರವೆನಿಸಿದೆ. ನಂಬಿಕೆ ಅದರಲ್ಲೂ ಪರಿಸರದಲ್ಲಿರುವ ಮಹತ್ವವನ್ನು ಸಾರುವ ಪೂಜೆ ಮತ್ತು ಆಚರಣೆಗಳು ಪ್ರಚಲಿತದಲ್ಲಿ ಬಂದಿರಲು ಸಾಕು. ಹಿಂದಿನ ರೈತರು ನದಿ, ಪರ್ವತ, ಕಲ್ಲು, ಕಟ್ಟಿಗೆ, ಗಿಡಮರ, ಮಣ್ಣು, ಬೆಳೆದ ದವಸಧಾನ್ಯ, ಎತ್ತು, ಆಕಳು ಮೊದಲಾದ ಪ್ರಾಣಿಗಳಲ್ಲಿ ದೈವೀ ಸ್ವರೂಪ ಕಂಡಿದ್ದರು. ಅಂತೆಯೇ ಪರಿಸರ ರಕ್ಷಣೆ ಸಾಧ್ಯವಾಗಿತ್ತು. ಹವಾಮಾನದಲ್ಲಿ ಏರು-ಪೇರು ಆಗುತ್ತಿರಲಿಲ್ಲ.

ಮಣ್ಣು ಸಕಲ ಜೀವರಾಶಿಗಳಿಗೆ ಸಂಜೀವಿನಿ ಎನಿಸಿದೆ. ಮಣ್ಣು ತಯಾರಾಗಲು ಯುಗಯುಗಗಳೇ ಬೇಕು. ಈ ಮಣ್ಣು ರೈತರಿಗೆ ಭೂಮಿತಾಯಿ ಎನಿಸಿದೆ. ಪಂಚಮಹಾಭೂತಗಳಲ್ಲಿ ಮಣ್ಣು ಪ್ರಮುಖವಾದುದು. ಮಣ್ಣಿನಿಂದಲೇ ಅನ್ನ. ಮಣ್ಣಿನಲ್ಲೇ ಚಿನ್ನ. ಮಣ್ಣಿನಲ್ಲೇ ಹುಟ್ಟು ಮಣ್ಣಿನಲ್ಲೇ ಬದುಕು. ಹುಟ್ಟಿದವನು ಕೊನೆಗೆ ಮಣ್ಣಿನಲ್ಲೇ ಲೀನವಾಗುವನು. ಸುರಿವ ಮಳೆಗೆ ಹೊಲದ ಮೇಲ್ಮಣ್ಣು ಕೊಚ್ಚಿಕೊಂಡು ಹೋಗದಂತೆ ಮಣ್ಣಿನ ರಕ್ಷಣೆಯನ್ನು ರೈತರು ಮಾಡುತ್ತಲೇ ಬಂದಿದ್ದಾರೆ. ಮಣ್ಣಿನ ಮಹತ್ವ ಸಾರುವುದು. ಮಣ್ಣಿಗೆ ಗೌರವ ತರುವುದು ಮಣ್ಣಿನ ಪೂಜೆಯ ಸಂಕೇತ. ಆಷಾಡ, ಶ್ರಾವಣ ಮಾಸಗಳಲ್ಲಿ ಬರುವ ಅಮಾವಾಸ್ಯೆ ಹಾಗೂ ಹಬ್ಬಗಳಲ್ಲಿ ಮಣ್ಣಿನ ಪೂಜೆಗೆ ಅಗ್ರಸ್ಥಾನ. ಆಷಾಡ ಮಾಸದ ಪ್ರತಿ ಸೋಮವಾರ ಮಣ್ಣಿನ ಎತ್ತುಗಳನ್ನು, ಪ್ರತಿ ಮಂಗಳ ವಾರ ಮಣ್ಣಿನ ಗುಳ್ಳವ್ವಗಳನ್ನು ಪೂಜಿಸಲಾಗುತ್ತಿದೆ. ನಾಗರ ಪಂಚಮಿಯ ದಿವಸ ಹುತ್ತದ ಮಣ್ಣಿನಿಂದ ಮಾಡಿದ ಹಾವಿನ (ನಾಗಪ್ಪನ) ಮೂರ್ತಿ ಮಾಡಿ ಪೂಜಿಸಲಾಗುತ್ತಿದೆ. ಅದೇ ರೀತಿ ಗಣೇಶ ಚೌತಿಯಂದು ಮಣ್ಣಿನ ಗಣಪತಿಯ ಪೂಜೆ ಮಾಡಲಾಗುತ್ತಿದೆ.

ಬೇಸಾಯಕ್ಕೆ ಎತ್ತುಗಳು ಅವಶ್ಯವಾಗಿವೆ. ಅಂತೆಯೇ ಮಣ್ಣಿನ ಎತ್ತುಗಳ ಪೂಜೆ ಮಾಡಲಾಗುತ್ತಿದೆ. ಎತ್ತುಗಳ ಬೇಸಾಯಕ್ಕೆ ಯಾವುದೇ ಖರ್ಚು ಮಾಡಬೇಕಿಲ್ಲ. ನಾವೆಲ್ಲಾ ತಿಂದು ಬಿಟ್ಟ ಹುಲ್ಲು, ಹೊಟ್ಟುಗಳನ್ನು ತಿಂದು ಅವು ಪ್ರತಿಯಾಗಿ ಹೊಲಕ್ಕೆ ಉತ್ಕೃಷ್ಟವಾದ ಗೊಬ್ಬರವನ್ನು ಕೊಡುತ್ತವೆ. ಹೊಲದಿಂದ ದವಸಧಾನ್ಯಗಳನ್ನು ಹೇರಿಕೊಂಡು ಬರಲು, ಹೊಲಕ್ಕೆ ಚಕ್ಕಡಿಯನ್ನು ಹೂಡಿ ಅದರಲ್ಲಿ ಗೊಬ್ಬರ ಹೇರಲಾಗುತ್ತಿದೆ. ಈ ಚಕ್ಕಡಿಯನ್ನು ಎಳೆಯಲು ಎತ್ತುಗಳೇ ಬೇಕು. ಡಿಸಾಯಿಲ್ ಪೆಟ್ರೋಲ್‌ಗಳ ಹಂಗಿಲ್ಲದೆ ಎತ್ತುಗಳು ಗಳೆ ಹೊಡೆಯಲು, ಚಕ್ಕಡಿಯನ್ನು ಎಳೆಯಲು ಉಪಯುಕ್ತವಾಗಿವೆ. ಪ್ರತಿ ಸೋಮವಾರ ಎತ್ತುಗಳನ್ನು ಬಳಸುವುದಿಲ್ಲ. ಹೀಗಾಗಿ ಎತ್ತಿನ ಪೂಜೆ ಸಾಗಿ ಬಂದಿದೆ. ಮಣ್ಣಿನ ಎತ್ತುಗಳು ಜೀವಂತ ಎತ್ತುಗಳ ಪ್ರತೀಕವೆನಿಸಿವೆ. ಮೈತೊಳೆದು ಪೂಜೆ ಮಾಡುವುದು ರೂಢಿ. ಆ ದಿವಸ ಎತ್ತುಗಳಿಗೆ ರಜೆ.

**ನಾಗರಪಂಚಮಿ :**

ಪಂಚಮಿಯ ಹಬ್ಬವನ್ನು ನಾಗರಪಂಚಮಿ ಎಂದೇ ಕರೆಯುತ್ತಾರೆ. ನಾಗರಪಂಚಮಿಯ ದಿವಸ ನಾಗರಹಾವನ್ನು ಹುತ್ತದಲ್ಲಿರುವ ಮಣ್ಣಿನಿಂದ ಮಾಡಿ ಪೂಜೆ ಮಾಡಿ ಹಾಲೆರೆಯುವ ರೂಢಿಯಿದೆ. ಹಾವು ವಿಷಜಂತು. ಅದು ವಿಷಯವಾಸನೆಯ ಸಂಕೇತವೆನಿಸಿದೆ. ಯೋಗಸೂತ್ರದ ಪ್ರಕಾರ ಕುಂಡಲಿನೀ ಶಕ್ತಿಯ ಸಂಕೇತವಾಗಿ ಹಾವನ್ನು ಪೂಜೆ ಮಾಡಲಾಗುತ್ತದೆ. ಕುಂಡಲಿನೀ ಶಕ್ತಿಯ ಜಾಗೃತಿಗಾಗಿ ಯೋಗಸಾಧನೆ ಮಾಡಲಾಗುತ್ತಿದೆ. ಹುತ್ತದಲ್ಲಿ ಹಾವು ವಾಸಮಾಡಿರುವುವು ಎಂಬ ನಂಬಿಕೆಯಿಂದ ಹುತ್ತದ ಮಣ್ಣಿನಿಂದ ಹಾವನ್ನು ಮಾಡಲಾಗುತ್ತಿದೆ. ಈ ಹುತ್ತದಲ್ಲಿ ಹಲವಾರು ರಂಧ್ರಗಳಿರುತ್ತವೆ. ಮನುಷ್ಯನ ಶರೀರದಲ್ಲೂ ಒಂಭತ್ತು ದ್ವಾರಗಳಿವೆ. **'ಮನವೇ ಸರ್ಪ ತನುವೇ ಹೇಳಿಗೆ'** ಬಸವಣ್ಣನವರ ಮಾತಿನಂತೆ ಹಾವಿನೊಡನೆ ಬದುಕು ನಡೆಸುವಾಗ ಮನಸ್ಸೆಂಬ ಹಾವಿನ ವಿಷ ಸೇರದಂತೆ (ಹಾವಿನಿಂದ ಕಡಿಸಿಕೊಳ್ಳದ ಹಾಗೆ) ಸದಾ ಎಚ್ಚರದಿಂದಿರ ಬೇಕು.

**ಅರಣ್ಯ :**

ಅರಣ್ಯನಾಶದಿಂದ ಮಣ್ಣಿನ ಸವಕಳಿ ಹೆಚ್ಚಾಗುತ್ತಿದೆ. ಹೊಲದ ಮೇಲ್ಮಣ್ಣು ಸಹಿತ ಕೊಚ್ಚಿ ಹೋದರೆ ಹೊಲದ ಫಲವತ್ತತೆ ನಾಶವಾಗುತ್ತದೆ. ಇದನ್ನೆಲ್ಲ ತಡೆಯುವುದರ ಮಹತ್ವವನ್ನು ಸಾರುವ ಸಂದೇಶವೇ ಮಣ್ಣಿನ ಪೂಜೆಯಾಗಿದೆ. ಆಷಾಢಮಾಸದಲ್ಲಿ ಮಳೆ ಕಡಿಮೆ. ಆಷಾಢ ಎಂದರೆ ಅನಿಷ್ಟ ಆಷಾಢ ಮಾಸ ಕಳೆಯುವುದೆಂದರೆ ಕಷ್ಟದ ದಿವಸಗಳನ್ನು ಕಳೆದಂತೆ. ಆಷಾಢದಲ್ಲಿ ದುರ್ಭಿಕ್ಷ ಉಂಟಾಗುತ್ತಿತ್ತು. ಕಾಳು ಕಡಿ, ಹೊಟ್ಟು ಮೇವು ಮುಗಿಯುತ್ತ ಬರುತ್ತಿದ್ದವು. ಹೀಗಾಗಿ **'ಆಷಾಡದಲ್ಲಿ ಅಧಿಕ ಮಾಸ'** ಬರಬಾರದೆಂಬ ಭಾವನೆಯೂ ಇದೆ. ಕಷ್ಟದ ದಿನಗಳ ಅವಧಿ ಹೆಚ್ಚಾಗಬಾರದೆಂದು ರೈತರು ದೇವರಲ್ಲಿ ಬೇಡಿಕೊಳ್ಳುತ್ತಿದ್ದರು. ಆಷಾಢ ಬೀಸುವ ಶುಷ್ಕ ಗಾಳಿಗೆ ದನಕರುಗಳಿಗೆ ಕಾಲು ಬೇನೆ ಬಾಯಿ ಬೇನೆಗಳು ಬರುವುದು ಸ್ವಾಭಾವಿಕ. ಏನೇ ಇರಲಿ ಆಷಾಡ ಮಾಸದಲ್ಲಿ ಶುಭ ಕಾರ್ಯಗಳನ್ನು ಮಾಡದೇ ಶ್ರಾವಣಕ್ಕೆ ಮುಂದೂಡುತ್ತಾರೆ.

**ಸಂಭ್ರಮದ ಕಾಲ :**

ಶ್ರಾವಣ ಮಾಸದಲ್ಲಿ ಮಳೆ ಸುರಿದು ಬೆಳೆಗಳ ಸಂದಿಗ್ಧ ಹಂತದಲ್ಲಿ ಮಳೆಯಿಂದ ಹುಲುಸಾಗಿ ಬೆಳೆಗಳು ಬೆಳೆಯುತ್ತವೆ. ತಿಂಗಳೊಪ್ಪತ್ತಿನಲ್ಲಿ ಮುಂಗಾರಿ ಬೆಳೆಗಳು ಕೊಯ್ಲಿಗೆ ಬರುತ್ತವೆ. ಶ್ರಾವಣ ಸಂಭ್ರಮದ ಸಂಕೇತ ಎನಿಸಿದೆ. ಶ್ರಾವಣದ ಮಳೆಗೆ ಹೊಲಗದ್ದೆ, ಬಯಲು, ಹಾದಿಬೀದಿಗಳ ಬದಿಗಳಲ್ಲೂ ಹಚ್ಚ ಹಸಿರು ಕಣ್ತೆರೆಯುತ್ತದೆ. ಶ್ರಾವಣ ಹೊಸ ಹೊಸ ಭರವಸೆಗಳನ್ನು ತರಬಲ್ಲದು. ಸರ್ವಚೇತನ ರೂಪಿಯಾದ ಶ್ರಾವಣದಲ್ಲಿ ಶುಭ ಕಾರ್ಯಗಳನ್ನು ಮಾಡುವುದು ಪ್ರಸ್ತುತವೆನಿಸಿದೆ. ಅಂತೆಯೇ 'ಶ್ರಾವಣ ಬಂತು ನಾಡಿಗೆ.... ಬಂತು ಕಾಡಿಗೆ' ಎಂದು ವರಕವಿ ಅಂಬಿಕಾತನಯದತ್ತ ಅವರು ಹಾಡಿದ್ದಾರೆ. ಶ್ರಾವಣದ ಮಳೆಗೆ ನೆಲ ತೊಯ್ದು (ಮುಟ್ಟಿ) ಮುತ್ತಿನ ಮಳೆಗೆರೆದು ಹಸಿರಿನಮೇಲೆ ಮುತ್ತಿನ ಹನಿಗಳು ಹೊಳೆಯುತ್ತವೆ. ಮಹಾಕವಿ ಕಾಳಿದಾಸನು ತನ್ನ ಮೇಘದೂತ ಮಹಾಕಾವ್ಯದಲ್ಲಿ ಶ್ರಾವಣ ಮಾಸದ ಈ ಮೋಡಗಳ ಮೂಲಕ ಸಂದೇಶ ಕಳಿಸುವ ಯಕ್ಷನ ಬಗ್ಗೆ ಪ್ರಸ್ತಾಪಿಸಿದ್ದಾರೆ.

ಶ್ರಾವಣ ಮಾಸದಲ್ಲಿ ಮಠ ಮಂದಿರಗಳಲ್ಲಿ ವಿಶೇಷ ಪೂಜೆ ಪುನಸ್ಕಾರಗಳು ನಡೆಯುತ್ತವೆ. ಪುರಾಣ ಪ್ರವಚನಗಳನ್ನು ಏರ್ಪಡಿಸಲಾಗುತ್ತದೆ. ಹಾದಿ ಬೀದಿ ಹಾಗೂ ಬೇಲಿಯ ಮೇಲೂ ಹೂವು ಅರಳುತ್ತವೆ. ಮೋಡಗಳ ಹಾಡಿಗೆ ಸೂರ್ಯ ಮಲಗಿ (ಮರೆಯಾಗಿ) ನಿದ್ರಿಸುವನು. ನಾಡಿಗೆ ದೊಡ್ಡ ಹಬ್ಬ ನಾಗರ ಪಂಚಮಿಯ ಹಬ್ಬ. ನಾರಿಯರೆಲ್ಲ ಆಚರಿಸುವ ಹಬ್ಬ. ವಿಧ ವಿಧದ ಉಂಡೆಗಳನ್ನು ತಿನ್ನುತ್ತ, ಅರಳುಗಳನ್ನು ತಿನ್ನುತ್ತ ಜೋಕಾಲಿ ಆಡುವ (ಜೀಗುವ) ಹಬ್ಬವಿದು. ಜೀವನ ಜೋಕಾಲಿಯನ್ನು, ಜೀವನದಲ್ಲಿ ಸುಖ -ದುಃಖ, ಸಿರಿತನ-ಬಡತನ, ಸುಗ್ಗಿ-ಆಷಾಢಗಳನ್ನು, ಏರು-ಪೇರುಗಳನ್ನು ನೆನಪಿಸುವ ಸಂಭ್ರಮದ ಕಾಲ ಶ್ರಾವಣಮಾಸ. ❋

* 'ಈನಿಂಕಿ', ಕವಿತಾ ಪ್ರಕಾಶನ, ಗುಡಿಕಟ್ಟಿ, ಅಂಚೆ ಕ್ರ. 591 104. ಬೆಳಗಾವಿ ಜಿಲ್ಲೆ.

## ಶ್ರೀವಾಣಿ

ಸ್ವಾತಂತ್ರ್ಯ ಅರ್ಥವತ್ತಾಗಬೇಕಾದರೆ, ಶಕ್ತಿವತ್ತಾಗಬೇಕಾದರೆ ಜನರಲ್ಲಿರುವ ತಪ್ಪು ಕಲ್ಪನೆ ಭ್ರಮೆ ಹೋಗಬೇಕು. ಅವರ ಭ್ರಮೆ ಸ್ವಾತಂತ್ರ್ಯವೆಂದರೆ ಕಾಮಧೇನು. ಕಲ್ಪವೃಕ್ಷ ಸಕಲ ಇಷ್ಟಾರ್ಥಗಳನ್ನೀಯುವ ಶಕ್ತಿ ಎಂದು ಭಾವಿಸಿದ್ದಾರೆ. ವಿದ್ಯಾರ್ಥಿಗಳು ಓದದೆ ರ್‍ಯಾಂಕು ಪಡೆಯಬೇಕು. ರೈತರು ಕಷ್ಟಪಟ್ಟು ವ್ಯವಸಾಯ ಮಾಡದೆ ಹುಲಿಸು ಬೆಳೆಯನ್ನು ಪಡೆಯಬೇಕು. ಬೆಸ್ತ, ಕಾರ್ಮಿಕರು, ಬಂಡವಾಳಗಾರರು, ಅಧಿಕಾರಿಗಳು- ಎಲ್ಲಾ ವರ್ಗದ ಜನರಿಗೂ ಕಷ್ಟಬೇಡ, ಬೆವರು ಸುರಿಸುವ ದುಡಿಮೆ ಬೇಡ, ಕರ್ತವ್ಯಬೇಡ, ಹಣಬೇಕು, ಫಲಬೇಕು. ಮೋಡಗಳಿಲ್ಲದೆ ಮಳೆ ಸುರಿಯಬೇಕು. ಈ ಕೀಳು ಮನೋಭಾವದ ಅಂಟುಜಾಡ್ಯ ತೊಲಗದ ಹೊರರು ಸ್ವಾತಂತ್ರ್ಯದ ಸಾರ್ಥಕತೆ ಇಲ್ಲ.



# ತೀವ್ರರೋಗಗಳಲ್ಲಿ ನಿಸರ್ಗೋಪಚಾರ *

-ಜಿ.ವಿ. ವೆಂಕಟನಾರಾಯಣ ಶಾಸ್ತ್ರಿ

'ತೀವ್ರ ಖಾಯಿಲೆಗಳಿಗೆ ಚಿಕಿತ್ಸೆ ಮಾಡಲು ಹೊರಟಾಗ ಮೊದಲ ನಿಯಮ 'ಮಾಡಬೇಡ' ಜ್ಞಾಪಕದಲ್ಲಿಟ್ಟುಕೋ, ಕಾಯಿಲೆ ಎನ್ನುವುದೇ ಜೀವಶಕ್ತಿ ತನ್ನ ರಕ್ಷಣೆಗಾಗಿ ನಡೆಸುತ್ತಿರುವ ಹೋರಾಟ ಇದನ್ನು ನಿಲ್ಲಿಸಬಾರದು. ನಿಸರ್ಗ ನಿಯಮ ದಂತೆ ಮುಂದುವರಿಯಲು ಬಿಡಬೇಕು'- Introduction to Natural Hygiene. Dr. Herbert M. Shleton.

ತೀವ್ರಕಾಯಿಲೆಗಳು ತಮ್ಮ ಸ್ವಂತ ಪರಿಮಿತಿ ಯಲ್ಲಿರುತ್ತವೆ. ಶೇಕಡ ತೊಂಬತ್ತೈದು ಭಾಗ ಯಾವ ಚಿಕಿತ್ಸೆಯೂ ಇಲ್ಲದೆ ವಾಸಿಯಾಗುತ್ತದೆ'- Dr. Herben M. Shelton.

ಹಾಗೆಂದು ನಾವು ಸುಮ್ಮನೆ ಕೂಡುವುದು ಸರಿಯಲ್ಲ. ಕೊಳೆಯನ್ನು ತೆಗೆಯಲು ನಮ್ಮದೂ ಒಂದು ಕೈ ಹಾಕ ಬೇಕು. ಆದರೆ ಅದಕ್ಕೂ ಮುಂಚೆ ಆ ನಿಸರ್ಗ ಏನು ಬಯಸುತ್ತದೆ ಎನ್ನುವುದನ್ನು ಅರ್ಥಮಾಡಿಕೊಳ್ಳಬೇಕು. ನಿಸರ್ಗದ ಬಯಕೆ-ಪೂರ್ಣ ವಿಶ್ರಾಂತಿ. ಶಾರೀರಿಕ ಹಾಗೂ ಮಾನಸಿಕ ವಿಶ್ರಾಂತಿ. ಆದರೆ ರೋಗ ಬಂದ ತಕ್ಷಣ ನಮ್ಮ ಮೊದಲ ಕಾರ್ಯವೇನು?-ಗಡಿಬಿಡಿ. ರೋಗಿಯ ಬಗ್ಗೆ ನಿಮಗೆ ನಿಜವಾದ ಕಳಕಳಿ ಇದ್ದಲ್ಲಿ ಮೊದಲು ನಾವು ಮಾಡಬೇಕಾದ ಕೆಲಸ, ತಂಪಾದ ಗಾಳಿ, ಮಂದವಾದ ಬೆಳಕು, ಕಡಿಮೆ ವಸ್ತುಗಳು ಇರುವ ರೂಮಿನಲ್ಲಿ ಹಾಸಿಗೆ ಹಾಸಿಕೊಡುವುದು. ಇದು ಶಾರೀರಿಕ ವಿಶ್ರಾಂತಿಗೆ ಅವಶ್ಯ. ಇನ್ನು ಮಾನಸಿಕ ವಿಶ್ರಾಂತಿಗಾಗಿ, ಅವನಿಗೆ ಧೈರ್ಯ, ರೋಗದ ಬಗ್ಗೆ ಜ್ಞಾನ ಮುಂತಾದುವುಗಳನ್ನು ಕೊಡುವುದು. ಮುಖ್ಯವಾಗಿ ಹೆಚ್ಚು ಬಂಧು-ಬಳಗದವರು, ಮಿತ್ರರನ್ನು ಒಳಗೆ ಬಿಡದಿರುವುದು. ಅವರುಗಳು ಕೈಕಾಲುಗಳನ್ನು ತೊಳೆಯದೆ ಅಥವಾ ಬೂಟಿನ ಕಾಲಿನಲ್ಲಿಯೇ ಬಂದು ರೋಗಿಯ ಪಕ್ಕ ಕೂಡುತ್ತಾರೆ. ಅವರ ಜೊತೆಯಲ್ಲಿ ಅದೆಷ್ಟು ಕ್ರಿಮಿಗಳನ್ನು ತರುತ್ತಾರೋ ದೇವರೇ ಬಲ್ಲ ! ಹಿಂದೆ ಈ ಸ್ಥಿತಿ ಇರಲಿಲ್ಲ. ರೋಗಿಯ ರೂಮಿಗೆ ಯಾರನ್ನೂ ಕೈಕಾಲು ತೊಳೆಯದೇ ಪ್ರವೇಶಿಸಲು ಬಿಡುತ್ತಿರಲಿಲ್ಲ. ಆಂಟಿ ಬಯೋಟಿಕ್ ಬಂದ ಮೇಲೆ ಇವೆಲ್ಲಾ ಅನವಶ್ಯಕ ಎಂಬ ಭ್ರಾಂತಿ ಬಂತು. ಒಳಗೆ ಪ್ರವೇಶಿಸಿದ ನಂತರ ಅವರ ಮೊದಲ ಪ್ರಶ್ನೆ, 'ಏನಯ್ಯಾ, ಯಾಕಯ್ಯಾ ನಿನ್ನೆ ಬೆಳಿಗ್ಗೆ ಚೆನ್ನಾಗಿದ್ದೆ, ಈಗ ಏನಾಯ್ತು? ಇತ್ಯಾದಿ. ಅವರ ಧ್ವನಿಯಲ್ಲಿ ಏನೋ ಆಗಬಾರದ್ದು ಆಗಿಹೋಗಿದೆ ಎಂಬಂತೆ. ಮುಂದೆ ಪ್ರಶ್ನೆಗಳ ಸುರಿಮಳೆ. 'ಔಷಧವನ್ನು ತೆಗೆದುಕೊಂಡೆಯಾ? ಒಂದು ವೇಳೆ ರೋಗಿ ಔಷಧವನ್ನು ತೆಗೆದುಕೊಳ್ಳುವುದನ್ನು ಮರೆತು ಬಿಟ್ಟಿದ್ದರೆ? ಔಷಧವಿಲ್ಲದೆ ರೋಗ ಹೇಗೆ ವಾಸಿಯಾಗುವುದೆಂಬುದು ಅವರ ತರ್ಕ. ಮುಂದೆ ಹಾಗೆಯೇ ಸಾಗುತ್ತದೆ ಅವರ ವಾಗ್ಝರಿ. ಯಾರ್‍ಯಾರಿಗೆ ಈ ಖಾಯಿಲೆ ಬಂದಿತ್ತು ಅವರಲ್ಲಿ ಯಾರ್‍ಯಾರು ಸತ್ತರು ಇತ್ಯಾದಿಗಳ ಪಟ್ಟಿ. 'ಏನು ಆಹಾರ ಕೊಟ್ಟಿರಿ', 'ಏನೂ ಕೊಟ್ಟಿಲ್ಲವೇ? ಹಾಗಾದರೆ ಶಕ್ತಿ ಎಲ್ಲಿಂದ? ಜ್ವರ ಬಂದಿರುವವನು ಯುದ್ಧ ಮಾಡಬೇಕೇ?' ಇಂತಹ ಮಿತ್ರರನ್ನು ಬಂಧುಗಳನ್ನು ದೂರವಿಡಲು ಪ್ರಯತ್ನಿಸಿ. ನಿಮ್ಮ ನಿಸರ್ಗೋಪಚಾರದ ಡಂಗುರ ಬೇಡ. ಅಂತಹವರನ್ನು ಆದಷ್ಟು ಬೇಗ ಸಾಗಹಾಕಿ, ಬನ್ನಿ, ನಂತರ ನಮ್ಮ ಕೆಲಸವನ್ನು ನಾವು ಮಾಡೋಣ.

ಮೊದಲ ಕಾರ್ಯಕ್ರಮ ಪ್ರಾರ್ಥನೆ. ವ್ಯಾಪಾರದ ದೃಷ್ಟಿ ಯಿಂದಲ್ಲ. 'ನೀನು ವಾಸಿ ಮಾಡಿದರೆ ನಾನು ನಾಲ್ಕಾಣೆ ಕೊಡುತ್ತೇನೆ' - ಈ ರೀತಿಯ ಚೌಕಾಸಿ ಬೇಡ. ಧೈರ್ಯ ವನ್ನು ಬೇಡಿ, ಜ್ಞಾನವನ್ನು ಬೇಡಿ. ಬೇಗ ವಾಸಿಯಾಗಲೆಂದು ಹಂಬಲಿಸಿ, ಒಂದು ವೇಳೆ ದೇವರಲ್ಲಿ ನಂಬಿಕೆಯಿಲ್ಲದಿದ್ದರೆ ನಿಸರ್ಗವನ್ನೇ ನಂಬಿ. ಪ್ರಕೃತಿಯೇ ಪರಮಾತ್ಮನ ಪ್ರಕಟಿತ ರೂಪ. ನಂತರ ಐದು ಜನ ವೈದ್ಯರ ಸಹಾಯವನ್ನು ತೆಗೆದುಕೊಳ್ಳಿ. ಆಕಾಶ, ಗಾಳಿ, ಸೂರ್ಯ, ನೀರು ಮಣ್ಣು ಇವರೇ ಆ ಐದು ಜನ ವೈದ್ಯರು. ಒಂದು ಮಡಕೆಯಲ್ಲಿ ಮಣ್ಣು, ಒಂದು ಬಾತ್ ಟಬ್, ಒಂದು ಎನಿಮಾ ಕ್ಯಾನ್, ಪಟ್ಟಿಗಳನ್ನು ಹಾಕಲು ಬಟ್ಟೆ, ಬಿಸಿನೀರು-ತಣ್ಣೀರು, ಕೆಲವು ವೇಳೆ ಐಸ್, ಒಂದು ಹಾಟ್ ವಾಟರ್ ರಬ್ಬರ್ ಬ್ಯಾಗ್ ಇಷ್ಟಿದ್ದರೆ ತೀರಿತು ಸಲಕರಣೆ. ಇದೇ ನಿಸರ್ಗೋಪಚಾರಿಯ ಹೈಟೆಕ್ ಆಸ್ಪತ್ರೆ. ನಿಸರ್ಗೋಪಚಾರದ ಬಗ್ಗೆ ತಿಳುವಳಿಕೆ ಹಾಗೂ ತಾಳ್ಮೆ ಇವುಗಳೇ ತೀವ್ರಕಾಯಿಲೆಗಳನ್ನು ಸುಲಭ ವಾಗಿ ಕಳೆದುಕೊಳ್ಳುವ ಉಪಾಯ. ಎಲ್ಲಾ ತೀವ್ರ ಕಾಯಿಲೆ ಗಳಲ್ಲೂ ಗುಣವಾಗುವ ಕ್ರಿಯೆ ಕಾಯಿಲೆಗಳಲ್ಲಿಯೇ ಇದೆ. ಆದರೆ ಅದಕ್ಕೆ ಕಾಲ ಬೇಕು. ಈಗಿನ ವೇಗದ ಯುಗದಲ್ಲಿ ಕಾಲವನ್ನು ಎಲ್ಲಿಂದ ತರುವುದು? ಕಾಲ ವೇಗವಾದರೇನಂತೆ ಶರೀರ ಮಾತ್ರ ಹಿಂದಿನದೇ ತಾನೆ? ಆದ್ದರಿಂದ ನಿಸರ್ಗೋಪಚಾರಕ್ಕೆ ವೇಳೆಯನ್ನು ಮಾಡಿಕೊಳ್ಳಲೇಬೇಕು. ಇಲ್ಲದಿದ್ದರೆ ದುರಂತಕ್ಕೆ ಆಹ್ವಾನ ನೀಡಿದಂತೆ. ಡಾ॥ ಲಿಂಡ್ಲರ್‌ರವರು ತೀವ್ರ ಕಾಯಿಲೆಗಳು ಏಳು, ಹದಿನಾಲ್ಕು, ಇಪ್ಪತ್ತೊಂದು ಹೀಗೆ ಏಳರ ಗುಣಕವನ್ನು ಅನುಸರಿಸಿ ವಾಸಿಯಾಗುತ್ತದೆ ಎನ್ನುತ್ತಾರೆ. ನನ್ನ ಅನುಭವವೂ ಸಹ ಅದನ್ನು ಅನುಮೋದಿಸುತ್ತದೆ. ನೀವೂ ವೀಕ್ಷಿಸಿ ನೋಡಿ. ಮತ್ತೊಂದು ವಿಷಯ, ತೀವ್ರ ಕಾಯಿಲೆಗಳಲ್ಲಿ ಕಾವು, ನೋವು ಸಹಜ. ಅದಕ್ಕೆ ಭಯ ಬೇಡ. ತಂಪು ಮಣ್ಣು, ಬಿಸಿನೀರು, ಐಸ್ ಇವುಗಳು ನೋವನ್ನು ಕಡಿಮೆ ಮಾಡುತ್ತವೆ. ಉಪವಾಸ, ವಿಶ್ರಾಂತಿಗಳೇ ದಿವ್ಯೌಷಧ. ನಂತರ ಎನಿಮಾ, ಪಟ್ಟಿಗಳು, ಇತ್ಯಾದಿಗಳು. ತಾಳ್ಮೆಯಿಂದ ಹೀಗೆ ಉಪಚರಿಸಿದರೆ ತೀವ್ರ ಕಾಯಿಲೆಗಳು ತಮ್ಮಷ್ಟಕ್ಕೆ ತಾವೇ ಬಂದ ದಾರಿಯನ್ನು ಹಿಡಿಯುತ್ತವೆ.

*

* 'ನಿಸರ್ಗ ಯೋಗಧಾಮ' ನಂ. ೨/೨೦೫೯, ೧೧ನೇ ಕ್ರಾಸ್, ಎಸ್.ಎಸ್.ಪುರಂ, ತುಮಕೂರು -೫೭೨ ೧೦೨.



ಬಸವಣ್ಣ ಅಂದು ವೀರಶೈವಕ್ಕೆ ತಂದುಕೊಟ್ಟ ವೈಚಾರಿಕ ಮೌಲ್ಯಗಳು ಅಂದಿಗೆ ಮಾತ್ರವಲ್ಲ ಎಂದೆಂದಿಗೂ ಉಳಿಯುವಂತಹವು. ಜೀವನವನ್ನು ಪೂರ್ಣದೃಷ್ಟಿಯಿಂದ ನೋಡುವ ಪರಿಪೂರ್ಣ ಧರ್ಮವಾಯಿತು ವೀರಶೈವ. ಪೂರ್ಣ ಜೀವನದರ್ಶನವನ್ನು ಪಡೆದು ಅದನ್ನು ನಿತ್ಯ ಜೀವನದಲ್ಲಿ ಅಳವಡಿಸಿಕೊಳ್ಳುವ ಆಚರಣೆಯ ಮಾರ್ಗವನ್ನು ರೂಢಿಸಿತು. ಅದು ಇಂದಿಗೂ ಪ್ರಸ್ತುತವಾಗಿದೆ. ಇಂದಿನ ಬದಲಾದ ಪರಿಸರಕ್ಕೆ ಅನುಗುಣವಾಗಿ ಅದನ್ನು ಅನ್ವಯಿಸಿಕೊಳ್ಳಬೇಕಾಗಬಹುದು ಅಷ್ಟೆ. ಸರ್ವಸಮಾನತೆಯನ್ನು ಕಾರ್ಯತಃ ಸಾಧಿಸಿ ತೋರಿಸುವುದಕ್ಕೆ ಇಂದು ಇಷ್ಟಲಿಂಗದ ಅವಶ್ಯಕತೆ ಇಲ್ಲದಿರಬಹುದು. ಆಧುನಿಕ ಯುಗದಲ್ಲಿ ಮಾನವ ಸಮಾನತೆ ಮತ್ತು ಸಮಾನ ಅವಕಾಶಗಳು ಒಪ್ಪಿಕೊಂಡಿರುವ ಮೌಲ್ಯ, ಕೊನೆಯೆ ಪಕ್ಷ ತತ್ತ್ವದಲ್ಲಾದರೂ ಅದನ್ನು ಒಪ್ಪಿಕೊಂಡಿದ್ದೇವೆ. ಬಸವಣ್ಣನ ಕಾಲದಲ್ಲಿ ಸಮಾಜ ಅದನ್ನು ತಾತ್ತ್ವಿಕವಾಗಿಯೂ ಒಪ್ಪಿಕೊಂಡಿರಲಿಲ್ಲ. ತಾರತಮ್ಯವೇ ಅಂದಿನ ನಿಯಮವಾಗಿತ್ತು. ಅದನ್ನು ಕಾರ್ಯತಃ ಪ್ರತಿಭಟಿಸಲು ಇಷ್ಟಲಿಂಗ ಒಂದು ಸಾಧನವಾಯಿತು. ಇಂದು ಆ ದೃಷ್ಟಿಯಿಂದ ಅದು ಬೇಕಿಲ್ಲದಿದ್ದರೂ ಅದಕ್ಕಿಂತ ಹೆಚ್ಚು ವಿಚಾರಶೀಲವಾದ ಉಪಾಸನೆಯ ದೃಷ್ಟಿಯಿಂದ ಮತ್ತು ಆಂತರಿಕ ಅನ್ವೇಷಣೆಯ ದೃಷ್ಟಿಯಿಂದ ಲಿಂಗದ ಮೌಲ್ಯ ಇನ್ನೂ ಅಧಿಕಗೊಳ್ಳಬೇಕಾಗುತ್ತದೆ. ಆಧುನಿಕ ಯುಗದಲ್ಲಿ ಅರವಿಂದರು ಕಂಡ ಪೂರ್ಣಯೋಗದ ಆಶಯ ಇಷ್ಟಲಿಂಗದ ಅನುಸಂಧಾನದಲ್ಲಿ ಮತ್ತು ಷಟ್‌ಸ್ಥಲಮಾರ್ಗದ ಮುನ್ನಡೆಯಲ್ಲಿ ಈಡೇರುತ್ತಾ ಹೋಗುವುದನ್ನು ಕಾಣಬಹುದು.

ಲಿಂ. ಡಾ॥ ಎಚ್. ತಿಪ್ಪೇರುದ್ರಸ್ವಾಮಿ

*(ಕೃಪೆ: ವೀರಶೈವ ದೀಪ್ತಿ ತತ್ತ್ವ ಚಿಂತನೆ)*

RNI No. 17139/69 "Siddaganga" Monthly - Postal Reg. No. KA/SK/TMR/385/2009-11



ಬಸವ ಸಮಿತಿ ಮತ್ತು ತುಮಕೂರು ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಸಂಯುಕ್ತ ಆಶ್ರಯದಲ್ಲಿ ಜುಲೈ ೨೫ರಂದು ಏರ್ಪಡಿಸಿದ್ದ ಬಸವೇಶ್ವರ ಪುರಾಣ-ಕಾವ್ಯ ವಿಚಾರ ಸಂಕಿರಣವನ್ನು ಪೂಜ್ಯ ಶ್ರೀ ಶ್ರೀಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು.



ಬೆಂಗಳೂರು ಗ್ರಾಮಾಂತರ ಜಿಲ್ಲೆ ಅದರಂಗಿ ಗ್ರಾಮದಲ್ಲಿ ನಡೆದ ಗುರುವಂದನಾ ಕಾರ್ಯಕ್ರಮ ಮತ್ತು ಬಸವೇಶ್ವರ ದೇವಾಲಯದ ನೂತನ ಕಟ್ಟಡವನ್ನು ಪರಮಪೂಜ್ಯ ಶ್ರೀಗಳವರು ಉದ್ಘಾಟಿಸಿದರು. ವೇದಿಕೆಯಲ್ಲಿ ಹರಗುರು ಚರಮೂರ್ತಿಗಳು ಮತ್ತು ಗಣ್ಯರು ಉಪಸ್ಥಿತರಿದ್ದರು



ಪಾವಗಡದ ಶ್ರೀ ರಾಮಕೃಷ್ಣ ಸೇವಾಶ್ರಮದ ವತಿಯಿಂದ ಶ್ರೀ ಜಪಾನಂದಜೀ ಮಹಾರಾಜ್ ಅವರ ನೇತೃತ್ವದಲ್ಲಿ ಏರ್ಪಡಿಸಿದ್ದ ಪರಮಪೂಜ್ಯ ಶ್ರೀಗಳವರಿಗೆ ಗುರುವಂದನಾ ಸಮಾರಂಭದಲ್ಲಿ ಭಕ್ತಿ ಸಮರ್ಪಣೆ ಸಲ್ಲಿಸಲಾಯಿತು.



ಡಾ. ಪಿ. ಪರಮಶಿವಯ್ಯನವರು ರಚಿಸಿದ 'ಆದಾಯ ತೆರಿಗೆ' ಕೃತಿಯನ್ನು ಪರಮಪೂಜ್ಯ ಶ್ರೀಗಳವರು ಇತ್ತೀಚೆಗೆ ಶ್ರೀಮಠದಲ್ಲಿ ಲೋಕಾರ್ಪಣೆ ಮಾಡಿದರು.



ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರ ಸಾನ್ನಿಧ್ಯದಲ್ಲಿ ನಡೆದ ಸಮಾರಂಭದಲ್ಲಿ ಶ್ರೀಮಠದ ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರ ನೀಡಲಾಯಿತು.



ಬೆಂಗಳೂರು ಪೈ ಇಂಟರ್‌ನ್ಯಾಷನಲ್ ಎಲೆಕ್ಟ್ರಿಕಲ್ ಕಂ. ಯವರು ಕೊಡಮಾಡಿದ ಇಪ್ಪತ್ತು ಸಾವಿರ ನೋಟ್‌ಪುಸ್ತಕಗಳನ್ನು ಶ್ರೀಮಠದ ಪ್ರಾಥಮಿಕ ಶಾಲಾ ವಿದ್ಯಾರ್ಥಿಗಳಿಗೆ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ವಿತರಿಸಿದರು.

Cover printed at : Geetanjali Graphics, # 4, M.S.R. Indl. Estate, Bangalore-54. Ph : 23604087